ಪ್ರಕಟನೆಯ ೨೮ ನೆಯ ವರ್ಷ : ೧೯೯೩

# ಸಂಕ್ರಮಣ

೨೫೬

---

## ಸಂಕ್ರಮಣ ಸಾಹಿತ್ಯ ಸ್ಪರ್ಧೆ : ೧೯೯೩
## ಬಹುಮಾನಿತ ಬರಹಗಳು

**ಬಸು ಬೇವಿನಗಿಡದ**
ಶೇಕಪ್ಪ ಮತ್ತು ಬೋಕಿಯ ತುಣುಕುಗಳು

**ಆರ್. ಮೋಹನ ನಾಗಮ್ಮನವರ**
ಹಾದರದ ಕಥೆ ಎಂಬೋ ಕಥೆ

**ಆರ್. ನಿರ್ಮಲ**
ಪ್ರಯಾಣ ಕಾಲ, ಸಖಿ

ಕೆ. ಆರ್. ಆನಂದ, ಕರುಣಾಕರ ಮದ್ರಾಸು, ಕೊಂಪಿ ಗುರುಬಸಪ್ಪ, ಗೋಪಾಲ ಪೂಜಾರಿ, ಚಂದ್ರಿಕಾ ಪಿ., ಚಿತ್‌ಪ್ರಭಾ, ಜಿ. ಪರಮೇಶ್ವರ ಕತ್ತಿಗೆ, ಫಣಿರಾಜ ಕೆ., ಮಾಧವಿ ಭಂಡಾರಿ, ಮಾ. ರಾ. ರುದ್ರಾಚಾರ ಇವರ ಕವನಗಳು

ಇಪ್ಪತ್ತೈದು ಹನಿಗವನಗಳು

**ಚಂಪಾಕಾಲಂ**
೧೯೯೩ ರ ಕೆಲವು ಕವನಗಳು

---

ಸಂಪುಟ ೨೮: ಸಂಚಿಕೆ ೧೨ ಡಿಸೆಂಬರ ೧೯೯೩

# ಸಂಕ್ರಮಣ

ಡಿಸೆಂಬರ ೧೯೯೩

ಸಂಪುಟ ೨೮ : ಸಂಚಿಕೆ ೧೨



ಸಂಪಾದಕಿ

ನೀಲಾ ಪಾಟೀಲ

ಸಲಹಾ ಸಂಪಾದಕ

ಚಂದ್ರಶೇಖರ ಪಾಟೀಲ





**SANKRAMANA 256**

A Monthly in Kannada

December 1993 Vol. XXVIII No. 12

Sankramana Prakashana Dharwad-580 001 Phone : 40509

Printed at Chandana Mudrana, Dharwad-8 Phone : 44863

Annual Subscription : Rs. 50/-

# ೧೯೯೩ ರ ಕೆಲವು ಕವನಗಳು

ಚಂದ್ರಶೇಖರ ಪಾಟೀಲ

## ೧ ಶಾಲ್ಮಲಾ ನನ್ನ ಶಾಲ್ಮಲಾ

ಎಲ್ಲೊ ಹುಟ್ಟಿ ಎಲ್ಲೊ ಬೆಳೆದು
ಒಳಗೊಳಗೇ ಹರಿಯುವವಳು
ಜೀವ ಹಿಂಡಿ ಹಿಪ್ಪೆಮಾಡಿ
ಒಳಗೊಳಗೇ ಕೊರೆಯುವವಳು
ಸದಾ ಗುಪ್ತಗಾಮಿನಿ
ನನ್ನ ಶಾಲ್ಮಲಾ
ಹಸಿರು ಮುರಿವ ಎಲೆಗಳಲ್ಲಿ
ಬಸಿರ ಬಯಕೆ ಒಸರುವವಳು
ತುಟಿ ಬಿರಿಯುವ ಹೂಗಳಲ್ಲಿ
ಬೆಂಕಿ ಹಾಡು ಉಸುರುವವಳು
ಸದಾ ತಪ್ತ ಕಾಮಿನಿ
ನನ್ನ ಶಾಲ್ಮಲಾ
ಭೂಗರ್ಭದ ಮೌನದಲ್ಲಿ
ಜುಮ್ಮೆನ್ನಿತ ಬಳುಕುವವಳು
ಅರಿವಿಲ್ಲದೆ ಮೈಯ ತುಂಬಿ
ಕನಸಿನಲ್ಲಿ ತುಳುಕುವವಳು
ಸದಾ ಸುಪ್ತ ಮೋಹಿನಿ
ನನ್ನ ಶಾಲ್ಮಲಾ
ನನ್ನ ಬದುಕ ಭುವನೇಶ್ವರಿ
ನನ್ನ ಶಾಲ್ಮಲಾ
ನನ್ನ ಹೃದಯ ರಾಜೇಶ್ವರಿ
ನನ್ನ ಶಾಲ್ಮಲಾ

## ೨ ಗೆರೆಯ ಆ ಕಡೆ

ಕಲಿತಿದ್ದೇವೆ ಸಾಲೆಯಲ್ಲಿ ಪಾಠ :
ಭೂ-ಗೋಲದ ಮೇಲೆಲ್ಲ
ಅಕ್ಷಾಂಶ-ರೇಖಾಂಶಗಳಿವೆಯಂತೆ !
ನಮ್ಮ ಕ್ಯಾಲೆಂಡರುಗಳಿಗೆ
ನಮ್ಮ ಗೋಪುರ ಗಡಿಯಾರ, ಟೈಂಪೀಸು, ವಾಚುಗಳಿಗೆ,
ನಮ್ಮ ನೋಯುವ ಕಾಯುವ ಸಾಯುವ ಗಳಿಗೆಗಳಿಗೆ
ಈ ಗೆರೆಗಳೇ ಆಧಾರವಂತೆ !

ಆದರೆ
ಈ ಗೆರೆಗಳ ಪರಿವೆ ಇದ್ದಂತಿಲ್ಲ
ಭೂಮಿಗೆ
ಹರಿವ ಹೊಳೆಗಳಿಗೆ
ಹಾರುವ ಹಕ್ಕಿಗಳಿಗೆ

ಗೆರೆಯ ಆ ಕಡೆ ನಿಂತು.
ನನ್ನ ಕಣ್ಣಿಗೆ ಹಾಕುವ ನಿನ್ನ ಕಣ್ಣಿನ
ಪಾತಾಳಗರಡಿಯ ಹುರಿಗೆ
ನಾನು ಪಿಸುಗುಡುವ ಕವನ
ನಿನ್ನ ಕಿವಿ ತುಂಬುವ ಗುರಿಗೆ
ಈ ಗೆರೆಯ ಪರಿವೆ ಇದ್ದಂತಿಲ್ಲ.

ಈ ಪರಿ ಹೀಗಿರುವಾಗ
ಗೆರೆಗಳ ಮಾತೇಕೆ, ಸಂಗಾತಿ,
ನನ್ನ ನಿನ್ನ ನಡುವೆ ?

## ೩ ನಮ್ಮ ಅಭಿಯ ತೋಟ

ನಮ್ಮ ನಿಮ್ಮ ತೋಟದಲ್ಲಿ
ಬೀಜ, ಬೇರು ಎಲ್ಲ ಒಳಗೊಳಗೆ.

ಹೊರಗೆ ಮಾತ್ರ ನೀಟಾಗಿ ಬೆಳೆದ್ದ ಬೊಡ್ಡೆ,
ಬೊಡ್ಡೆಗೆ ಟೊಂಗೆ, ಟೊಂಗೆಗೆ ಎಲೆ, ಹೂವು...

ಹೀಗೆ ಒಂದು, ನಂತರ ಮತ್ತೊಂದು, ನಂತರ ಮಗುದೊಂದು.
ಈ ಅಂತರಕ್ಕಿದೆ ಒಂದು ಲಯ, ಒಂದು ರೂಪ, ಒಂದು ಅರ್ಥ.
ಈ ಅಂತರವೇ ಒಂದು ಅಸ್ತಿತ್ವ.

ಆದರೆ ನಮ್ಮ ಅಭಿಯ ತೋಟದಲ್ಲಿ
ಕಾಲಕ್ಕೆ, ಕಾಲನ ಹೆಜ್ಜೆಗಳಿಗೆ ಆ ಹೆಜ್ಜೆಗಳ
ಅಂತರಕ್ಕೆ, ಧಡಕಿಗೆ, ಧಾಡಸಿತನಕ್ಕೆ
ಯಾವ ಕಿಮ್ಮತ್ತೂ ಇಲ್ಲ.

ನಮ್ಮ ಅಭಿಯ ತೋಟದಲ್ಲಿ, ಕಣ್ಣೆದುರಿಗೇ,
ಮುಗುಳು ಬೀರುತ್ತವೆ ಬೀಜಗಳು.
ಕಾಲ ಕಾಲಲ್ಲೇ ಬೇರು ಹರಿದಾಡುತ್ತವೆ
ಕಡಿದ ಬೊಡ್ಡೆಯ ತುಂಡು ತಬ್ಬಿಕೊಳ್ಳುತ್ತವೆ ಒಂದನ್ನೊಂದು.
ತೊಟ್ಟು ಕಳಚಿದರೂ ಹಸಿರೆಲೆ
ಹಸಿರಾಗಿಯೇ ಜೀಕುತ್ತವೆ ಜೋಕಾಲಿ ಗಾಳಿಯಲ್ಲಿ.
ಹೂವು ಪಕಳೆ ಪಕಳೆ ನಗೆ ಚಿಮ್ಮಿ
ಆಕಾಶವನ್ನೇ ರಂಗೇರಿಸುತ್ತದೆ.
ಹೌದು. ಇಲ್ಲಿ ಯಾವ ಅಂತರವೂ ಇಲ್ಲ
ಎಲ್ಲ ಖುಲ್ಲಾ ಖುಲ್ಲಾ.

ನಮ್ಮ ನಿಮ್ಮ ತೋಟ
ಮೌನದಲ್ಲಿ ಅಂತರಗಂಗೆಯಾಗಿ ಹರಿದು
ಕೊನೆಗೆ ದನಿಯಾಗುವ
ಕವನದಂತೆ.
ನಮ್ಮ ಅಭಿಯ ತೋಟ
ಈ ಕ್ಷಣದ ಮಿಂಚಿನ ಸ್ಫೋಟ-
ದಲ್ಲಿ ಎಲ್ಲ ಬಯಲಾಗಿಸುವ
ಚಿತ್ರದಂತೆ.

ಸ್ಫೂರ್ತಿ : ಮಧು ದೇಸಾಯಿ ಅವರ Abhi's Garden ಶೀರ್ಷಿಕೆಯ ಪೇಂಟಿಂಗ್.

## ೮ ಪ್ರೀತಿಯ ಕವಿ

"ನನ್ನ ಪ್ರೀತಿಯ ಕವಿಯೆ,
ಹಿಂದಿನಂತೆ
ಬೆಚ್ಚಿ ಬೀಳಿಸುವ ಕವನ
ಓದುವಿಯಾ ?"
—ಕೇಳಿದಳು ಹುಡುಗಿ.

ಕವನ ಓದಿದ ಕವಿ.
ಬೆಚ್ಚಿದಳು;
ಆಮೇಲೆ ಬೀಳಿಸಿದ.

## ೯ ಕಾಮ್ರೇಡ್

ಅಂಗೀ ತಗೆದು
ಅಂಗಾತಾಗಿ ಮಲಗಿದ್ದ
ಸಂಗಾತಿಯನ್ನು ಕಂಡು
ಸಂಗೀತವಾದಳು ಅವಳು.

ಕಾಮ್ರೇಡ್, ಕಾಮ್ರೇಡ್
ಅನ್ನುತ್ತ...ಕಾಮವಾಗಿ
ರೇಡ್
ಮಾಡಿದಳು.

## ೧೦ ಬಂಡಾಯ ಭಟ್ಟ

'ನಾವು ಬಂಡೆಗಳ ಮೇಲೆ
ಚಿಗುರಬೇಕಾಗಿದೆ.'
—ಎಂದು ಬಂಡಾಯ ಕವಿಯೊಬ್ಬ
ಚೀರಿಕೊಂಡ.

ನಮ್ಮ ಅಗ್ರಹಾರದ
ಅನಂತಮುಖೀ ಭಟ್ಟ
ಬೋಳು ತಲೆ ಮೇಲೆ ನಿಗುರಿ ನಿಂತ
ಚಂಡಿಕೆ ನೇವರಿಸುತ್ತ,
'ನಾವೂ ಹೀಗೇ ಚಿಗುರಿದ್ದು'
-ಎಂದುಕೊಂಡ,

## ೧೧ ಅಹಾ ಅವನ ತಲೆ

'ಅಹಾ ಅವನ ತಲೆ
ನನ್ನದಾಗಿದ್ದರೆ'
ಅಂತ ನನಗೆ ಅನ್ನಿಸುವುದು

ಶೇಕ್ಸ್‌ಪಿಯರ ನನ್ನೋ
ಐನ್‌ಸ್ಟೀನನನ್ನೋ ಆರ್ಯಭಟನನ್ನೋ
ನೆನೆದಾಗ ಅಲ್ಲ

ಮುಂದಿನ ಸೀಟಿನಲ್ಲಿ
ಕುಂತವಳ ಹೇಗಲ ಮೇಲೆ
ಬಗಲಲ್ಲಿ ಕುಂತವನ
ತಲೆ ಒರಗಿದಾಗ

## ೧೨ ಮೌನ : ತುಂಬಿದ ಕೊಡ

ಮೌನ :
ತುಂಬಿದ ಕೊಡ,
ಕವನ ತುಳುಕಾಡಿದೆ.

ತುಟಿ :
ತುಂಬಿದ ಕಡಲು.
ಮೌನ ಬಳುಕಾಡಿದೆ.

ಕಣ್ಣು :
ತುಂಬಿದ ಕೊಳ,
ತುಟಿ ಬಲು ಕಾಡಿದೆ.

## ೧೩ ಭೂಮಿಯ ನಂಟು

ಆಕಾಶದಲ್ಲಿ ಏನೇನೊ ಆದರೂ
ಏನೂ ಆಗಿರಲಿಲ್ಲ ನನಗೆ.
ದಿನಗಟ್ಟಲೆ ಮೋಡ ಡಬ್ಬು ಹಾಕಿದರೂ
ಮನಸು ಮಬ್ಬಾಗಿರಲಿಲ್ಲ.

ಗುಡುಗು ಗುಟುರು ಹಾಕಿದರೂ
ನಡುಗಿರಲಿಲ್ಲ ಮೈ.
ಮಿಂಚು ಕೋರೈಸಿದರೂ
ಕಣ್ಣು ಬೆಚ್ಚಿರಲಿಲ್ಲ.
ಆ ಅಂಚಿನಿಂದ ಈ ಅಂಚಿನವರೆಗೆ
ಕಾಮನ ಬಿಲ್ಲು ಬಗಲೆತ್ತಿ ನಿಂತರೂ
ನನ್ನ ತೋಳು ತಡವರಿಸಿರಲಿಲ್ಲ.

ಆದರೆ
ಇಂದು ಬೆಳಗಿನ ಜಾವ
ಕನಸಿನ ಗೊಂಡಾರಣ್ಯದಲ್ಲಿ
ನಾನು ಹರಿದಾಡುವಾಗ

ಭೂಮಿ ಒಂದು ಕ್ಷಣ-ಒಂದೇ ಕ್ಷಣ
ಮೈ ಒಡ್ಡು ಮುರಿದಾಗ

ಕಂಪಿಸಿದೆ ಇಡಿಯಾಗಿ
ತಳದಿಂದ ತುದಿತನಕ.
ಕಂಪಿಸಿತು ಕನಸು ರಕ್ತ ಕಂಪಿಸಿತು.

ಈ ಕ್ಷಣದಲ್ಲಿ ಗೊತ್ತಾಯಿತು :
ನನಗೆ ನಿನ್ನ ನಂಟು
ಅದು : ಭೂಮಿಯ ನಂಟು

# ಸಂಕ್ರಮಣ

## ಫಲಿತಾಂಶ

ಸಾಹಿತ್ಯ ಸ್ಪರ್ಧೆ : ೧೯೭೩ (ಬಹುಮಾನಿತರ ಹೆಸರು ಅಕಾರಾದಿಯಲ್ಲಿ)

---

### ಸಣ್ಣ ಕಥೆ

ಬಸು ಬೇವಿನಗಿಡದ (ಗುಲಬರ್ಗಾ) ಶೇಕಪ್ಪ ಮತ್ತು ಜೋಕಿಯ ತುಣುಕುಗಳು

ಆರ್. ಮೋಹನ ನಾಗಮ್ಮನವರ (ಧಾರವಾಡ) ಹಾದರದ ಕಥೆ ಎಂಬೋ ಕಥೆ

### ಲಲಿತ ಪ್ರಬಂಧ

ಆರ್. ನಿರ್ಮಲ (ಮೈಸೂರು) ಪ್ರಯಾಣ ಕಾಲ, ಸಖಿ

### ಕಾವ್ಯ

ಕೆ. ಆರ್. ಆನಂದ (ದಾವಣಗೆರೆ) ಹೀಗೊಬ್ಬ ಸಾಕ್ರಟೀಸ

ಕರುಣಾಕರ ಮದ್ರಾಸ (ಮದ್ರಾಸ) ಈಗೀಗ

ಕೊಂಪಿ ಗುರುಬಸಪ್ಪ (ಚಿಕ್ಕಮಗಳೂರು) ನಿರಾಶೆ

ಗೋಪಾಲ ಪೂಜಾರಿ (ಮುಂಬೈ) ಚೂರಿ

ಚಂದ್ರಿಕಾ ಪಿ. (ಬಿ. ಆರ್. ಪ್ರಾಜೆಕ್ಟ್) ನನ್ನ ಕವನಗಳು

ಚಿತ್‌ಪ್ರಭಾ (ಉಜಿರೆ) ಪ್ರಶಸ್ತಿ ಬಂದಿದೆ!

ಜಿ. ಪರಮೇಶ್ವರ ಕತ್ತಿಗೆ (ಹರಿಹರ) ಸೆಳವಿನ ಜೊತೆಗೆ

ಫಣಿರಾಜ ಕೆ. (ಮಂಗಳೂರು) ಮತ್ತೊಮ್ಮೆ ಹೇಳಲಾದ ಕಳ್ಳ-ಬಸವಣ್ಣರ ಕತೆ

ಮಾಧವಿ ಭಂಡಾರಿ (ಉಡುಪಿ) ಕಟ್ಟುವದು ಬಲು ಕಷ್ಟ

ಮಾ. ರಾ. ರುದ್ರಾಚಾರ (ಶಹಾಬಾದ) ಬೆಳಕು ಮತ್ತು ನಾವು

## ಹನಿಗವನ

(ಬಹುಮಾನಿತರ ಹೆಸರು ಮಾತ್ರ)

ಅರುಣ ಬಿ. ಕುಲಕರ್ಣಿ (ನರೇಗಲ್ಲ)
ಅಲ್ಲಾವುದ್ದೀನ ಯಮ್ಮಿ (ಕುಕನೂರು)
ವೈ. ಎಸ್. ಕೃಷ್ಣಮೂರ್ತಿ (ಬೆಂಗಳೂರು)
ಕಾಂತಾ ದತ್ತಾತ್ರೆಯ (ಹುಲಕೋಟಿ)
ಚಂದ್ರಶೇಖರ ಬೆನ್ನೂರ (ಹೂವಿನ ಹಡಗಲಿ)
ಎಚ್. ಜಯಮ್ಮ ಕರಿಯಣ್ಣ (ಬೆಂಗಳೂರು)
ತೈಕೊಳ್ಳಿ ಮಂಜುನಾಥ ಉಡುಪ (ಕೊಪ್ಪ)
ತೋಟಪ್ಪ ಎನ್. ಸವಡಿ (ವಾಯುಪಡೆ)
ನಾಗೇಶ ರಾಂಪೂರ (ಸಿಂದಗಿ)
ಪ್ರಕಾಶ ಕಡಮೆ (ಹಳಿಯಾಳ
ಪ್ರಕಾಶ ಆರ್. ಕಮ್ಮಾರ (ಸಾಗರ)
ಮೇಗರವಳ್ಳಿ ರಮೇಶ (ಸಾಗರ)
ಹೆಚ್. ವಿ. ರಮೇಶ (ಕೆ. ಜಿ. ಎಫ್.)
ಕೆ. ವಿ. ರಾಜಲಕ್ಷ್ಮಿ (ಬೆಂಗಳೂರು)
ಟಿ. ಎಸ್. ರಾಜೇಂದ್ರಪ್ರಸಾದ (ಹೊಸದುರ್ಗ)
ಲಕ್ಷ್ಮೀ ಸತ್ಯನಾರಾಯಣ (ಪೂನಾ)
ಪಿ. ವಾಸುದೇವರಾವ (ಉಡುಪಿ)
ವಿರೇಂದ್ರ ರಾವಿಹಾಳ (ತೆಕ್ಕಲಕೋಟೆ)
ಶರಣು ಬಳಿಗಾರ (ನರಗುಂದ)
ಶಂಕರರಾವ ಉಭಾಳೆ (ದೇವದುರ್ಗ)
ಶಾರದಾ ವಿ. ಮೂರ್ತಿ (ಬೆಂಗಳೂರು)
ಶಿವನಾಗಂ (ಮೈಸೂರು)
ಸುಜಿ ಕುರ್ಯ (ಪುತ್ತೂರು)
ಸುಧೀಂದ್ರ ಕೆ. ನಾಡಿಗ್ (ಹುಬ್ಬಳ್ಳಿ)
ಸುಬ್ರಹ್ಮಣ್ಯ ಭಟ್ (ಮಡಂತ್ಯಾರು)

---



---

# ಶೇಕಪ್ಪ ಮತ್ತು ಬೋಕಿಯ ತುಣುಕುಗಳು

ಬಸು ಬೇವಿನಗಿಡದ

ಎಷ್ಟು ರಾತ್ರಿಯಾದರೂ ನಿದ್ದೆ ಬಾರದ ಫಲವಾಗಿ ಶೇಕಪ್ಪ ಎದ್ದು ಕುಳಿತ. ಮನೆಯ ಕತ್ತಲು ಮನಸ್ಸಿನೊಳಗೆಯೂ ಇತ್ತು. ಹಾಸಿಕೊಂಡಿದ್ದ ಕೌದಿಯ ದಾರ ಕಾಲಿನ ಹೆಬ್ಬೆರಳ ಉಗುರಿಗೆ ಸಿಕ್ಕಿಹಾಕಿಕೊಂಡಿದ್ದನ್ನು ಬಿಡಿಸಿ ಕಾಲನ್ನು ಪಡಸಾಲೆಯ ಕಟ್ಟೆಯ ಮೇಲಿಂದ ಕೆಳಗೆ ಬಿಟ್ಟು ಆರಾಮವಾಗಲು ಯತ್ನಿಸಿದ. ಮೇಲೆ ನೋಡಿದ. ಮಣ್ಣಿನ ಗೋಡೆಯ ಮೇಲೆ ಬಿದಿರಿನ ಗಳ ಇರಿಸಿ ಕುಂಬಾರರ ಉದ್ದನೆಯ ಕರಿಹಂಚು ಹೊದಿಸಿದ್ದ ಚಾಟು ಅಂಕು ಡೊಂಕಾಗಿ, ಉಬ್ಬು ತಗ್ಗು ಹೊಂದಿ ತನ್ನಷ್ಟಕ್ಕೆ ಒಂದು ಆಕೃತಿಯನ್ನು ಪಡೆದುಕೊಂಡಿತ್ತು. ಕಾಲದ ಪ್ರಭಾವದಿಂದಲೂ, ನೈಸರ್ಗಿಕ ಪ್ರಕೋಪಗಳಿಂದಾಗಿಯೂ ಉಂಟಾದ ರಂಧ್ರಗಳ ಮೂಲಕ ಹೊರಗಿನ ಬೆಳಕು ಈ ಹಂಚಿನ ತಾಟಿನ ಮೇಲೆ ಬಿದ್ದು ಒಳಗಡೆ ಮನುಷ್ಯರ ಇರುವಿಕೆಗೆ ಅಗತ್ಯವಾದ ಬೆಳಕನ್ನು, ಗಾಳಿಯನ್ನು ಕೊಡುತ್ತಿತ್ತು. ಆ ಮನೆಯ ಗೋಡೆಗಳು, ಹೆಂಗಸನ್ನು ಸೀರೆ ಸುತ್ತಿಕೊಳ್ಳುವಂತೆ, ಮನೆಯ ಮಾನವನ್ನು ಅದರ ಸಂಸ್ಕೃತಿಯನ್ನು ತಮ್ಮ ತೆಕ್ಕೆಯಲ್ಲಿರಿಸಿಕೊಂಡಿದ್ದವು. ಆ ಗೋಡೆಗಳ ಬಿರುಕುಗಳು ಭಾರತ ಭೂಕಂಪಕ್ಕೆ ಒಳಗಾದಾಗ ಹುಟ್ಟಿದವುಗಳೆಂದೂ, ಅಲೆಗ್ಸಾಂಡರ್‌ನ ದಾಳಿಯ ಕಾಲದಲ್ಲಿ ಉದ್ಭವವಾದವುಗಳೆಂದೂ, ಗಾಂಧಿ ಸಾವಿಗೆ ನಲುಗಿದ್ದುವೆಂದೂ, ಅಯೋಧ್ಯೆಯ ರಕ್ತಕ್ಕೆ ಅತ್ತಿದ್ದುವೆಂದೂ. ಬ್ಯಾಂಕಿನ ಹಣವನ್ನು ಭೂಮಿಯ ಒಳಗಡೆ ಹುಗಿದಿಡುವಾಗ ಅದುರಿದ್ದುವೆಂದೂ, ಸಾಲಾಗಿ ನಿಲ್ಲಿಸಿದ್ದ ಮಕ್ಕಳನ್ನು ಒಂದೇ ಏಟಿಗೆ ಕತ್ತರಿಸಿದುದಕ್ಕೆ ಆಕ್ರಂದಿಸಿದ್ದವೆಂದೂ ಕೇಳಿ ಬರುವ ಜನರ ಗುಸುಗುಸು ಮಾತುಗಳಿಗೆ ಗೋಡೆಗಳು ಸುಸ್ತಾಗಿಬಿಟ್ಟಿದ್ದವು. ಶೇಕಪ್ಪನಪ್ಪನಪ್ಪನ ಕಾಲದಿಂದ ಇತಿಹಾಸ ಬರೆದುಕೊಂಡು ಬಂದಿದ್ದ ಅವು ಆ ಮನೆಯ ಬೆಳವಣಿಗೆಯನ್ನು ತಮ್ಮ ಬೆಳವಣಿಗೆಯೊಂದಿಗೆ

ಹೋಲಿಸಿ ನೋಡುತ್ತಿದ್ದವು. ತಮ್ಮನ್ನು ಗೋಡೆಯಾಗಿರಿಸಿದ ಕಲ್ಲು-ಮಣ್ಣಿಗೂ, ರಾಜ್ಯವಾಳುವ ಮನೆಗಳ ಕಲ್ಲು-ಮಣ್ಣಿಗೂ ಅಂತರವೇನೆಂದು ಅವಕ್ಕೆ ಅನಿಸುತ್ತಿತ್ತು. ಕರೀ ಕಲ್ಲು, ಬಿಳೀ ಕಲ್ಲು, ಅಮೃತಶಿಲೆ ಕಲ್ಲು, ಬಂಡೆಗಲ್ಲು, ಬೆಳ್ಳಿ-ಬಂಗಾರದ ಕಲ್ಲು ಮತ್ತು ಮನುಷ್ಯರ ಹೃದಯದ ಕಲ್ಲು ಎಂಬೆಲ್ಲ ಕಲ್ಲುಗಳ ಮಧ್ಯ ತಮ್ಮ ಸ್ಥಾನ ಗುರುತಿಸಿಕೊಳ್ಳಲು, ಇಡಿಯಾದ ಕಲ್ಲು-ಮಣ್ಣಿನ ಸಂಸ್ಕೃತಿಯಲ್ಲಿ ತಮ್ಮ ಇತಿಹಾಸ ಇಟ್ಟುಹೋಗಲು ಏನು ಮಾಡಬೇಕೆಂದು ಅವುಗಳ ಮಿದುಳು ವಿಚಾರ ಮಾಡುತ್ತಿದ್ದವು. ಶೇಕಪ್ಪ ಎದ್ದು ಕುಳಿತು ಮಾಡಿನಿಂದ ಚಿಮಣಿ ತೆಗೆದು ದೀಪ ಹಚ್ಚಿದಾಗ 'ಈ ಶೇಕಪ್ಪ ಏನಾದರೂ ಪ್ರಯತ್ನ ಮಾಡಿ ನಮ್ಮ ಇತಿಹಾಸ ಬದಲಿಸಿದರೆ ಇಂವಗ ಇಂವದು ಮತ್ತು ಓಡಿಹೋಗಿರುವ ಇಂವನ ಹೆಂತಿ ಪುಣ್ಯ ಸಿಕ್ಕು ಸುಖದ ನಿದ್ದಿ ಮಾಡಲಿ' ಎಂದು ಪ್ರಾರ್ಥಿಸಿ ಸುಮ್ಮನಾದವು.

ಒಂದೆರೆಡು ಪುಸ್ತಕ ತಂದಿದ್ದರೆ ನಿದ್ದೆ ಬರುವ ತನಕ ಓದಬಹುದಾಗಿತ್ತು ಎಂದುಕೊಂಡ ಶೇಕಪ್ಪ. ಗಪ್ಪ ಎನ್ನುವ ಮೌನದೊಡನೆ ಅವನು ಸುಮ್ಮನೆ ತನ್ನ ಉಸಿರ ಶಬ್ದ ಕೇಳುತ್ತ ಕುಳಿತ. ತಾನು ಹಾಸಿಕೊಂಡಿದ್ದ ಕೌದಿಯ ಮೇಲೆ ಕೈಯಾಡಿಸಿದ. ಬಣ್ಣ ಮಾಸಿದ್ದ, ದಾರ ಹರಿದು ಹೋಗಿ ಸಡಿಲವಾಗಿದ್ದ ಹಾಸಿಗೆಯ ಸ್ಪರ್ಶ ಅವನಲ್ಲಿ ಏನೋ ತುಂಬುತ್ತಿತ್ತು. ತನ್ನ ಬದುಕನ್ನು ಮರೆಯಲಾರನೆಂದು ಅದನ್ನು ಸುತ್ತಿ ಎದೆಗವಚಿಕೊಂಡ. ಈ ಹಾಸಿಗೆಯ ಶಕ್ತಿಯೆಲ್ಲ, ನೋವೆಲ್ಲ ತನ್ನೊಳಗೆ ಹರಿದು ಹೋಗಲಿ ಎಂದು ಬಿಗಿದ. ಹಾಸಿಗೆಗಷ್ಟೇ ಕೇಳುವಂತೆ 'ಯವ್ವಾ' ಅಂದ. ಅವ್ವನ ನೆನಪು ಅವನ ಕೊರಳು ಬಿಗಿಯಿತು. ಅವಳು ಸತ್ತಾಗ ಮಂದಿಯ ಎದುರು ಅಳಲಾರದವನು ಅವನು. ನಾಲ್ಕು ಗಂಡುಮಕ್ಕಳಲ್ಲಿ ಇವನೊಬ್ಬನೇ ಅತ್ತು ಕರೆಯದೇ ಅವಳನ್ನು ಕುಣಿಯಲ್ಲಿ ಮುಚ್ಚಿ ಹಾಕಿ ಬಂದು ಏಕಾಂತದಲ್ಲಷ್ಟೇ ಅತ್ತವನು. ಗೌರಿಯನ್ನು ನೋಡಿ ಅವಳಿಗೆ ಹೆದರಿಕೆಯಾಯಿತೋ ಎಂದೆನಿಸಿ ಮತ್ತೇ ಬೇರೆ ಕಡೆಗೆ ದೃಷ್ಟಿ ನೆಟ್ಟವನು. 'ಗೌರಿ'... ಎಂದ. ಗೌರಿ ಎಲ್ಲಿ ಹೋದಳು ! ಅವ್ವ, ಗೌರಿ ಅವನ ಮುಂದೆ ಅವನ ಮುಖ ನೋಡುತ್ತ ಕುಳಿತಂತಾಯಿತು. ಭಯ ಹುಟ್ಟಿಸುವ ಈ ಮನೆಯಲ್ಲಿ ಅವನಿಗೆ ಒಮ್ಮೆಲೇ ಚಳಿ ಹತ್ತಿತು. ತನ್ನ ತಲೆ ಕೈಯಾಡಿಸಿಕೊಂಡ. ಮುಖದ ಮೇಲಿನ ಬೆವರನ್ನು ಕೈಯಿಂದ ತಿಕ್ಕಿ ಒರೆಸಿದ. ಗಾಳಿ ಹೊಡೆದುಕೊಂಡ. ಚಿಮಣಿ ಹೊಗೆ ಬಿಡುತ್ತ ಉರಿಯುತ್ತಿತ್ತು.

ಗೌರಿ ಅವ್ವನನ್ನು ಯಾಕೆ ಕೊಂದಳು ?

ಅವ್ವನ ನೆನಪಿಗೆ ಕೌದಿಯನ್ನು ಗಟ್ಟಿಯಾಗಿ ಒತ್ತಿ ಹಿಡಿದ. ಸಿಟ್ಟು ಬರುತ್ತಿದ್ದಂತೆಯೇ

ನೋವೂ ಬಂದಿತು. ಜೊತೆಗೆ ಗೌರಿಯೂ ಬಂದಳು. ಮತ್ತಷ್ಟು ನೋವು. ಅವ್ವ ಗೌರಿಯನ್ನು ಯಾಕೆ ಕೊಂದಳು ?

*

ಆವಾಗಲೂ ಹೀಗೆಯೇ ಇತ್ತು. ಚಿಮಣಿ ಹೊಗೆಬಿಡುತ್ತ ಉರಿಯುತ್ತಿತ್ತು. ಜಗತ್ತೆಲ್ಲ ಮಲಗಿರುವಾಗ ಅವನ ಮನೆಯಲ್ಲಿ ಗದ್ದಲವಾಗುತ್ತಿತ್ತು. ಆ ಸಣ್ಣ ವಯಸ್ಸಿನಲ್ಲಿ ಅವನಿಗೆ ಅಳುವದು ಅಷ್ಟೇ ಗೊತ್ತು. ಹಿಂಸೆ, ನೋವು, ಅವಮಾನ ಅವನ ಅವ್ವನನ್ನು ಕಾಡಿಸುತ್ತಿದ್ದವು. ಸಣ್ಣಗೆ ಉರಿಯುವ ಚಿಮಣಿಯ ಬೆಳಕಿನಲ್ಲಿ ಅವ್ವನ ಅಳು ಅವನನ್ನು ತಟ್ಟಿ ಎಬ್ಬಿಸುತ್ತಿತ್ತು. ಅಪ್ಪ ಅವ್ವನನ್ನು ಹೊಡೆಯುವ, ಅವ್ವ ಕುಂತಲ್ಲೇ ಅಳುತ್ತ 'ಬೇಕಾದ್ರ ನನ್ನ ಕೊಲ್ಲು' ಎನ್ನುವ ದೃಶ್ಯಕ್ಕೆ ಶೇಕಪ್ಪ ಎದ್ದು 'ಯುವ್ವಾ' ವಂದು ಜೋರಾಗಿ ಅಳಲುತೊಡಗಿದಾಗ ಅವನ ಅಕ್ಕ 'ಎ ಸುಮ್ನ ಮಲಕೊ ಏನಿಲ್ಲ' ಎಂದು ತಟ್ಟಿ ಮಲಗಿಸುತ್ತಿದ್ದಳು. ರಾಸಾಯನಿಕ ಗೊಬ್ಬರ ಮತ್ತು ಬೀಜದ ಪ್ಲಾಸ್ಟಿಕ್ ಕವರಿನ ಹರಕಲು ಅರಿವೆ ತುಂಬಿದ ತಲೆದಿಂಬಿನಲ್ಲಿ ಶೇಕಪ್ಪನ ಕಣ್ಣೀರು ಕರಗಿ ಹೋಗುತ್ತಿರಲಿಲ್ಲ. ತೆರೆದ ಕಣ್ಣುಗಳಿಂದ ಬಿಕ್ಕುತ್ತ ಅವನು ನೋಡುವಾಗ ಬರೀ ಧೋತರದಲ್ಲಿರುತ್ತಿದ್ದ ಅಪ್ಪ ಅವ್ವನ ಸೀರೆ ಜಗ್ಗುತ್ತ ಅವಳನ್ನು ಎಳೆದಾಡುತ್ತ ಕತ್ತಲ ಮೂಲೆಗೆ ತಳ್ಳಿದಾಗ ಎಡವಿ ಬಿದ್ದೋ, ಗೋಡೆಗೆ ತಲೆ ಬಡಿದೋ ಜೋರಾಗಿ ನೆಲಕ್ಕೆ ಬಿದ್ದ ಪರಿಗೋ ಅವ್ವ 'ಯುವ್ವಾ' ಎಂದು ಚೀರಿದಾಗಲೆಲ್ಲ ಅಲ್ಲಿ ನೋವಿನ ಇತಿಹಾಸ ಬರೆಯಲ್ಪಡುತ್ತಿತು. ಕೆಲವು ನಿಮಿಷಗಳ ನಂತರ ಅಳುವ ತಾಯಿ–ಮಕ್ಕಳನ್ನು ಒದ್ದು ಅಪ್ಪ ಹೊರಗೆ ಹೋಗುವಾಗ ಅವನ ಕಾಲಿಗೆ ಬಡಿದ ಗಡಗಿ ಫಟ್ ಅಂತ ಬಡೆಯುತ್ತಿತ್ತು. ಅದರ ಚೂರುಗಳು ಮನೆ ತುಂಬ ಸಿಡಿಯುತ್ತಿದ್ದವು.

ಬೆಳಿಗ್ಗೆ ಎದ್ದಾಗ ಅಪ್ಪ ಬೇರೆಯ ತರವೇ ಇರುತ್ತಿದ್ದ. ರಾತ್ರಿಯ ಅವನ ಕ್ರೌರ್ಯಕ್ಕೂ, ಬೆಳಗಿನ ಅವನ ಪ್ರೀತಿಗೂ ಯಾವುದೇ ಸಂಬಂಧ ಇರಲಿಲ್ಲ. ಶೇಕಪ್ಪ ದೊಡ್ಡವನಾದಂತೆಲ್ಲ ತನ್ನ ಅಪ್ಪ ಮನಸ್ಸುಗಳನ್ನು, ಆಸೆಗಳನ್ನು ಬದಲಿಸುವ ಮನುಷ್ಯನಿರಬೇಕು ಎಂದುಕೊಳ್ಳುತ್ತಿದ್ದ. ಅವನಪ್ಪ ಎಂಥ ದ್ವಂದ್ವದ ವ್ಯಕ್ತಿಯಾಗಿದ್ದ ಎಂದು ಅವನಿಗೆ ಈಗ ಅನಿಸುತ್ತಿತ್ತು. ತನ್ನ ಮನೆಯ ಬಗ್ಗೆ, ತನ್ನ ಮಕ್ಕಳ ಬಗ್ಗೆ ಅಪ್ಪನಿಗೆ ಸುಂದರವಾದ ಕನಸುಗಳಿದ್ದಂತೆಯೇ ಅವನಲ್ಲಿ ಮೃಗೀಯ ಕಾಮವೂ ಇತ್ತು. ಅದಕ್ಕೆಂದೇ ಅವ್ವನ ರಾತ್ರಿಯ ಅಳು ಅವನಲ್ಲಿ ಯಾವುದೇ ಕರುಣೆಯನ್ನು ಹುಟ್ಟಿಸುತ್ತಿರಲಿಲ್ಲ. ತನ್ನಿಂದ ಮುಚ್ಚಿಟ್ಟಿದ್ದ ಪುಸ್ತಕವನ್ನು ಅಪ್ಪ ಇಲ್ಲದಾಗ ನೋಡಿದ, 'ಸ್ತ್ರೀ ಪುರುಷರ ರಹಸ್ಯಗಳು'. ಯಾವನೋ ಥರ್ಡರೇಟ ಮನುಷ್ಯ ಬರೆದಿದ್ದು. ತಾನು ಅದನ್ನು ಯಾಕೆ ಸುಟ್ಟೆ ? ಅದು ಬೆಂಕಿ ಹತ್ತಿ ಉರಿಯುವಾಗ ಅಪ್ಪನ ಮೇಲೆ ಸೇಡು ತೀರಿಸಿಕೊಂಡ ಭಾವನೆಯೆ ? ಅಪ್ಪ ಇದ್ದಿದ್ದರೆ ಏನೆನ್ನುತ್ತಿದ್ದ !

ಆದರೆ ತನ್ನ ಓದಿಗೆ ಅಪ್ಪ ದುಡಿಯುವದು, ಹಂಬಲಿಸುವದು ಶೇಕುನಿಗೆ ವಿಚಿತ್ರವಾಗಿ ತೋರುತ್ತಿದ್ದವು. ಅಪ್ಪ ಹಗಲು-ರಾತ್ರಿ ತಿಗರಿ ತಿರುವಿ ಗಡಗಿ ಮಾಡುವದು. ಅವ್ವ ಅವುಗಳನ್ನು ಹೊತ್ತು ಹಳ್ಳಿ ಹಳ್ಳಿ ತಿರುಗುವದು. ನಾಲ್ಕು ಗಂಡುಮಕ್ಕಳು, ಎರಡು ಹೆಣ್ಣುಮಕ್ಕಳು ಅವರಿಗೆ ಮುಂದಿನ ಸುಖದ ಆಸೆಗಳಾಗಿದ್ದವು. ಯಾರಿಗೂ ಓದು ಬಾರದ ಆ ಮನೆಯಲ್ಲಿ ಅಪ್ಪನೇ ಕನ್ನಡ ಆರನೆಯ ಇಯತ್ತೆಯವರೆಗೆ ಓದಿ ಅವರ ಮನೆಯ ಪರಂಪರಾಗತ ಸಮಸ್ಯೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಏಳನೆಯ ಇಯತ್ತೆಗೆ ಹೋಗದೇ ಕನ್ನಡ ಶಾಲೆಯ ಮಾಸ್ತರ ನೌಕರಿಯನ್ನು ಸ್ವಲ್ಪದರಲ್ಲಿ ಕಳೆದುಕೊಂಡಿದ್ದ. ಅವನ ತಮ್ಮನೊಬ್ಬ 'ಕುಂಬಾರಿಕೆಯೊಳಗೆ ಏನೈತಿ' ಅಂತ ಮೊದಲೇ ನಿರ್ಧರಿಸಿ ಏಳನೆಯ ಇಯತ್ತೆ ಪೂರ್ತಿ ಮುಗಿಸಿ ಮಾಸ್ತರನಾಗಿದ್ದ. ಮೈಗೆ ಕರಿ ಮಸಿ ಹಚ್ಚಿಕೊಳ್ಳುವ ಕೆಲಸವನ್ನು ಬಿಟ್ಟು ಆತ ಗರಿಗರಿ ಅಂಗಿ ತೊಟ್ಟು ಅಡ್ಡಾಡುವಾಗ ಅಪ್ಪನ ಮೈಯಲ್ಲಿ ಮುಳ್ಳುಗಳೇಳುತ್ತಿದ್ದವು. ಆವಾಗಲೆಲ್ಲ ಮೈಯಲ್ಲಿ ದೆವ್ವ ಹೊಕ್ಕವರಂತೆ ಗಡಗಿ ಬಡಿಯುತ್ತಿದ್ದ. ತಾನು ಜಗತ್ತಿನ ನೋವು ಬಡಿಯುವಂತೆ, ಅದನ್ನು ಕುಗ್ಗಿಸುವಂತೆ, ತನ್ನ ಮಕ್ಕಳು ಯಾರೂ ಬಡಿಯಬಾರದೆಂದು. ಮಸಿ ಹಚ್ಚಿಸಿಕೊಳ್ಳಬಾರದೆಂದು.

ಸವದತ್ತಿ ಯಲ್ಲಮ್ಮನ ಗುಡ್ಡದ ಜಾತ್ರೆ ಸಮೀಪ ಬಂದಂತೆಲ್ಲ ಅಪ್ಪನ ಕೈಗಳಿಗೆ ಹೆಚ್ಚಿನ ಬಲ ಬರುತ್ತಿತ್ತು. ಜಾತ್ರೆಯ ನೂರು ತರದ ಮಂದಿಗೆ ನೂರು ತರದ ಅಡಿಗೆ ಮಾಡಲು ಬೇಕಾಗಿದ್ದ ಗಡಿಗೆಗಳು ಕುಂಬಾರರ ಕನಸುಗಳನ್ನು ಹೊತ್ತು ಒಯ್ಯುತ್ತಿದ್ದವು. ಜಾತ್ರೆಯ ವೇಳೆಯಲ್ಲಿ ಕುಂಬಾರರ ಮನೆಗಳೆಲ್ಲ ಇಡೀ ರಾತ್ರಿ ದೀಪ ಉರಿಸುತ್ತಿದ್ದವು. ಫಟ್ ಫಟ್ ಅಂತ ಸೊಳದಿಂದ ಗಡಿಗೆ ಬಡಿಯುವ ಸದ್ದುಗಳು. ಒಂದಕ್ಕೊಂದು ಸ್ಪರ್ಧಿಸುತ್ತಿರುವಂತೆ, ಪ್ರತಿಧ್ವನಿಯಾಗುತ್ತಿರುವಂತೆ ಒಂದೇ ಸಪ್ಪಳ ಹಲವು ಬಗೆಯಲ್ಲಿ ಭಾಸವಾಗುತ್ತಿತ್ತು. ರೊಟ್ಟಿ ಬಡಿಯುವ ಹೆಂಗಸರು ಗಂಡಸರಿಗೆ ಸ್ಫೂರ್ತಿ ಬರಲೆಂದು ಒಂದೆರೆಡು ದಪ್ಪನ್ನ ರೊಟ್ಟಿಗಳಿಗೆ ಉಳ್ಳಾಗಡ್ಡಿ ಮೆಣಸಿನ ಕಾಯಿ ಒಗೆದು ತವೆಯಲ್ಲಿ ಒಂದು ಹನಿ ಎಣ್ಣೆ ಬಿಟ್ಟು ತಾಲಿಪಟ್ಟಿ ಮಾಡಿ ಅವುಗಳನ್ನು ಹಾಲಿಲ್ಲದ ಕರಿ ಚಹಾದೊಡನೆ ಕೊಟ್ಟರೆ ಗಂಡಸರು ಒಂದೆರೆಡು ಗಡಗಿ ಹೆಚ್ಚಿಗೆ ಮಾಡತ್ಯಾರು, ತಾಯಿ ಸವದತ್ತಿ ಯಲ್ಲಮ್ಮ ಒಂದೆರೆಡು ದುಡ್ಡು ಹೆಚ್ಚಿಗೆ ಕೊಟ್ಟಾಳು ಎಂದು ಭಾವಿಸುತ್ತಿದ್ದರು. ಯಲ್ಲಮ್ಮನ ಜಾತ್ರೆಗಳಿಗೆ ಅಪ್ಪನ ಜೊತೆ ಹಿರಿಮಗ ಹೋಗುತ್ತಿದ್ದ. ಮಗ ಗಡಿಗೆಗಳನ್ನು ಕಟ್ಟಿ ಒಯ್ದಿದ್ದ ಜಲ್ಲಿ ಕಲ್ಲಿಗಳನ್ನು, ಅಪ್ಪ ದುಡ್ಡಿನ ಚೀಲವನ್ನು ತರುತ್ತಿದ್ದರು. ಜಾತ್ರೆ ಮುಗಿಸಿ ಬರುವವರ ಮೈ ಮೇಲೆಲ್ಲ ಹಳದಿ ಬಣ್ಣ. ವಸ್ತ್ರಗಳೆಲ್ಲ ಹಳದಿ. ಶೇಕಪ್ಪ 'ಯಾಕ ಅರಿಷಿಣ ಪುಡಿ!' ಎಂದಾಗ ಅವ್ವ 'ಭಂಡಾರ' ಎಂದು ಅವನ ಹಣೆಗೆ ಹಚ್ಚುತ್ತಿದ್ದಳು. ಅವನ ಚೈನಿಗೆಂದು

ಎರಡು-ಮೂರು ರೂಪಾಯಿ ಚಿಲ್ಲರೆ ಕೊಡುತ್ತಿದ್ದಳು. ರೊಕ್ಕ ಕೂಡ ಹಳದಿ. ತಾಯಿ ಯಲ್ಲಮ್ಮನ ಹಳದಿ ಭಂಡಾರ ಆ ದುಡ್ಡಿಗೆಲ್ಲ ಮೆತ್ತಿಕೊಂಡಿರುತ್ತಿತ್ತು. ತಾನು ಹೆಚ್ಚಿಗೆ ಬುದ್ಧಿವಂತನಾಗುತ್ತೇನೆ ಎಂದು ಶೇಕಪ್ಪ ತನ್ನ ಪುಸ್ತಕಗಳಿಗೂ ಅದನ್ನು ಹಚ್ಚಿಕೊಳ್ಳುತ್ತಿದ್ದ. ಜಾತ್ರೆಯ ಪ್ಲಾಸ್ಟಿಕ್ ವಾಚನ್ನು ಕಟ್ಟಿಕೊಂಡು ಹಿಗ್ಗಿನಿಂದ ಶಾಲೆಗೆ ಹೋದರೆ ಅವನ ಗೆಳೆಯರೆಲ್ಲ ಗೇಲಿ ಮಾಡಿದ್ದರು. ಕುಂಬಾರನ ಕೈಯೊಳಗಿನ ವಾಚನ್ನು ಅವರು ಯಾಕೆ ಆಟದ ಅಂಗಳದಲ್ಲಿ ತೂರಾಡಿ ಕೇಕೆ ಹಾಕಿದರು ? ತಾನು ಅವರನ್ನು ಯಾಕೆ ಹೊಡೆಯಲಿಲ್ಲ ? ಅವ್ವನ ಮುಂದೆ ಬಂದು ಅಳುವ ಬದಲು ಅವರನ್ನು ಯಾಕೆ ಹೊಡೆಯಲಿಲ್ಲ ? ಬೇರೆ, ಚೆನ್ನಾಗಿರುವ ವಾಚನ್ನು ಯಾಕೆ ಕೇಳಿದೆ ? ಯಾಕೆ ಕೇಳಿ ಅಪ್ಪನ ದಮ್ಮು ಹೆಚ್ಚಿಸಿದೆ ? ಯಾಕೆ ಅವನನ್ನು ಮತ್ತಷ್ಟು ಗಡಿಗೆ ಮಾಡಲು ಹಚ್ಚಿದೆ ?....

ಅಪ್ಪನಿಗೆ ಸಾಯುವ ವಯಸ್ಸಲ್ಲ. ಆದರೆ ಇರಲು ಶಕ್ತಿಯೇ ಇರಲಿಲ್ಲ. ಯಾರು ಕಸಿದುಕೊಂಡರು ! ತಾನು! ಎಲ್ಲ ಮಕ್ಕಳು! ಅವನ ಕೌರ್ಯ ! ಇಲ್ಲವೇ ಅವನ ದುಡಿಮೆ! ಶೇಕಪ್ಪ ತಲೆ ಕೊಡವಿಕೊಂಡ ...

ತಾನು ಅಪ್ಪನನ್ನು ಯಾಕೆ ಅವನ ಸಾವಿನವರೆಗೂ ದ್ವೇಷಿಸಿದೆ! ಅವನು ಹಾಸಿಗೆ ಹಿಡಿದು ನರಳುವಾಗ ಇವನನ್ನು ಕರೆದು ಹತ್ತಿರ ಕೂಡ್ರಿಸಿಕೊಂಡು ಮೈದಡವಿ 'ಶೇಕು ಹೆಂಗಿದ್ದಿಯೊ', 'ನಿನ್ನ ಮ್ಯಾಲ ನನಗ ಬಾಳ ಪ್ರೀತಿ' ಎಂದೆಲ್ಲ ಅಂದರೂ ಇವನಿಗೆ ಚಿತ್ರಹಿಂಸೆಯಾಗಿ ಅವನ ಕೈ ಬಿಡಿಸಿಕೊಂಡು ಎದ್ದು ನಿಲ್ಲುತ್ತಿದ್ದ. ಅಪ್ಪನ ಪಾಪಕ್ಕೆ ಪ್ರಾಯಶ್ಚಿತ್ತವಾಗುತ್ತಿದೆ ಎಂದುಕೊಳ್ಳುತ್ತಿದ್ದ.

ತನ್ನನ್ನು ಅಪ್ಪ ಪ್ರೀತಿ ಮಾಡಿದರೆ ತಾನು ಅವನನ್ನು ಯಾಕೆ ದ್ವೇಷಿಸಿದೆ. ಅದೂ ಅವನು ಸಾಯುವವರೆಗೂ ! ದಿನವೂ ಅವ್ವನನ್ನು ಅವಮಾನದಲ್ಲಿ ಬತ್ತಲೆಗೊಳಿಸುತ್ತಿದ್ದ ಅಪ್ಪನನ್ನು ಯಾಕೆ ಪ್ರೀತಿಸಬೇಕಿತ್ತು !

ಅಪ್ಪಾದರೂ ಅವ್ವ ಅಪ್ಪನ ಕೊನೆಯ ದಿನಗಳತನಕ ಅವನನ್ನು ಎಬ್ಬಿಸುವದು, ಅವನ ಮೈ ತೊಳೆಯುವದು, ಈಗ 'ಅವಮಾನ'ದಲ್ಲಿ ಬಿದ್ದಿರುವ ಅವನಿಗೆ ಧೋತರ ಉಡಿಸುವದು, ಅವನ ಉಗುಳು, ಕಫ ಒರೆಸಿ ಚೆಲ್ಲುವದು ಮಾಡಿದ್ದಳು.

ತಾನು ಏನು ಮಾಡಿದೆ ?

ಅಪ್ಪ ಸತ್ತ ಮೇಲೆ ಅವನ ಇತಿಹಾಸ ಹುಡುಕಿದೆ. ಅವನ ದೌರ್ಬಲ್ಯಗಳನ್ನು ಗುರುತಿಸುವಾಗಲೆಲ್ಲ ಖುಷಿ ಎನಿಸುತ್ತಿತ್ತು. ಎಲ್ಲೋ ಮುಚ್ಚಿಟ್ಟಿದ್ದ ಪುಸ್ತಕ ತೆಗೆದೆ.

'ಸ್ತ್ರೀಯರ....' ಥೂ ! ಅದನ್ನು ಸಂಡುವಾಗ ಮೈಯೆಲ್ಲ ಬೆಂಕಿ, ಹತ್ತಿರವೇ ಇದ್ದ ಗಡಗಿಯೊಂದನ್ನು ಜೋರಾಗಿ ಒದ್ದದ್ದಕ್ಕೆ ಹಲವು ಚೂರುಗಳಾಗಿ ಸಿಡಿಯಿತು. ಒಂದು ಚೂರಾದರೂ ಅಪ್ಪನ ಗೋರಿಗೆ ಹೋಗಿ ಬಡೆದಿರಬೇಕು !

ಮಕ್ಕಳೆಲ್ಲ ಹೊಲ ಮಾಡಿ ಹೆಚ್ಚಿಗೆ ಉತ್ಪನ್ನ ತರುತ್ತಿದ್ದಾರೆ. ಈಗ ಯಾಕೆ ಕುಂಬಾರಿಕೆ ಬೇಕು ಎಂದು ಶೇಕಪ್ಪ ಅಂದರೂ ಅವ್ವ ತನ್ನ ಕೈಲಾದಷ್ಟು ಗಡಿಗೆ ಮಾಡಿ ಮತ್ತೊಬ್ಬ ಕುಂಬಾರರ ಆವಿಗೆಯಲ್ಲಿ ಸುಟ್ಟು ಸುತ್ತಲಿನ ಹಳ್ಳಿಗಳಿಗೆ ಹೋಗಿ ಗೌಡ್ರುಮನಿ, ತಳವಾರ ಮನಿ, ಹಾಲಿನವರ ಮನಿ, ಅಗಸರ ಮನಿ ಒಂದೂ ಬಿಡದೆ ಎಡತಾಕಿ ಹೊಲದ ಉತ್ಪನ್ನಕ್ಕಿಂತ ಹೆಚ್ಚಿನ ಉತ್ಪನ್ನ ಸಾಧಿಸುತ್ತಿದ್ದಳು. ಅವ್ವನನ್ನು ದುಡಿಯಲು ಹಚ್ಚಬಾರದೆಂದು ಶೇಕಪ್ಪ ಅಣ್ಣಂದಿರಿಗೆ ಸಿಟ್ಟಿಗೇಳುತ್ತಾನೆ. ಅವರ ಜೊತೆಗೆ ಅವನೂ ಅವಳು ತಂದ ಹಾಲು-ಮೊಸರು-ಬಾಳೆಹಣ್ಣು-ಪಪ್ಪಾಯಿ ತಿಂದು ಸುಖ ಉಣ್ಣುತ್ತಿದ್ದವನಿಗೆ ಅವ್ವ ತರುವ ಸುಖದ ಹಿಂದೆ ಅವಳು ಅನುಭವಿಸುವ ಕೀಳರಿಮೆ ಮತ್ತು ಯಾತನೆಗಳು ಅವನು ಮರೆಯುಲಾಗದಂತೆ ಒಮ್ಮೆ ಹಿಂಡಿದವು.

ಅವ್ವನ ಜೊತೆಗೆ ಇವನೂ ಹೋಗಿದ್ದ. ತಾನು ಸಾಲಿ ಕಲಿಯುತ್ತಿದ್ದರೇನಾಯಿತು, ಅವ್ವನಿಗೆ ಅವಳ ಗಡಿಗೆಯ ಜೊತೆಗೆ ಹೋದರೆ ಅವಳು ಇನ್ನೂ ಉತ್ಸಾಹ ಪಡುತ್ತಾಳೆ ಎಂದು ರಾತ್ರಿಯೆಲ್ಲ ಹಿಗ್ಗು. ಅವ್ವನಿಗೂ ತಾನು ಗಡಗಿ ಕೊಡುವ ಧಣಿಯ ಮನೆಗಳಿಗೆ ತನ್ನ ಸಾಲಿಮಗನನ್ನು ತೋರಿಸುವ ಆಸೆ. ಧಣಿಯೊಬ್ಬರ ಮನೆಯಲ್ಲಿ ಉತ್ಸಾಹ ತುಳುಕಿಸುತ್ತ ಖುರ್ಚಿಯೊಂದರ ಮೇಲೆ ಕುಳಿತಾಗ ಇಡೀ ಮನೆಯವರೆಲ್ಲ ಅವ್ವನ ಮೇಲೆ ಹರಿಬಿದ್ದು, 'ಎಂಥ ಬುದ್ಧಿ ಕಲಿಸಿದೀ ಮಗಗ ?... ನಮ್ಮ ಸಮಕ್ಕ ಕುಂಡ್ರತಾನಂದ್ರ...' ಎಂದದ್ದಕ್ಕೆ ಅವ್ವ "ಇಲ್ಲೆಳೆಪ್ಪಾ ಇನ್ನೊಮ್ಮೆ ಕರಕೊಂಡ ಬರಾಂಗಿಲ್ಲ. ತಪ್ಪಾತು" ಎಂದು ಕಾಲಿಗೆ ಬೀಳಲು ಹೋಗುವದೇ? ತನಗೆ ಎಲ್ಲಿತ್ತು ಸಿಟ್ಟು? 'ಇವನೌವ್ವನ ಈ ಗಡಗಿ'...ಎಂದು ಗಡಿಗಿಯೊಂದನ್ನು ಒದ್ದಾಗ ಅದು ನೂರು ನೂರು ಚೂರು. ಗಡಗಿ ಕೊಳ್ಳಲು ಬಂದಿದ್ದ ಧಣಿಯ ಹೆಂಡತಿಗೆ ಬಡಿಯಿತಂತೆ. ಅವ್ವ ತನ್ನನ್ನು ಹೊಡೆಯಲು ಭಂದಳು. ಗಡಗಿಯ ಚೂರು ದಿಲ್ಲಿಗೆ ಬಡಿಯಲಿ ತನಗೇನು ಎಂದ ಮನಸ್ಸಿನಲ್ಲಿ. ಅವಳ ತಲೆಗೆ ಬಡಿಯತಂತೆ ಚೂರು. ಅವರು ಮಾಡಿದ ಸೊಕ್ಕಿಗೆ ದೊಡ್ಡ ಕಲ್ಲು ಒಗೆಯಬೇಕಾಗಿತ್ತು. ಅವಳನ್ನು ರಾತ್ರಿ ತನ್ನ ಅಪ್ಪನ ಕೈಗೆ ಕೊಡಬೇಕಿತ್ತು ಎಂಬ ಯೋಚನೆ ಕೂಡ ಹರಿದುಹೋಯಿತು.

ಆ ಘಟನೆಯಿಂದ ಮತ್ತು ದಿನಂಪ್ರತಿ ಅಂಥ ಘಟನೆಗಳ ಮೇಲೆಯೇ ಬದುಕುವ ತನ್ನ ಅವ್ವನಂತಹ ವ್ಯಕ್ತಿಗಳ ಆ ದುಡಿಮೆ ಅವನಲ್ಲಿ ಬಹಳಷ್ಟು ಬೇಸರ, ಸಿಟ್ಟು ತುಂಬಿದವು. ಶೇಕಪ್ಪ ಕಾಲೇಜು ಕಲಿಯುವಾಗಲೆಲ್ಲ ಅವಮಾನದ ನೋವು ಅವನನ್ನು ತುಂಬಿಕೊಳ್ಳುತ್ತಿತ್ತು.

ಆ ಇತಿಹಾಸದ ಅವನಗಾನಗಳನ್ನು ಈಗ ಶೇಕಪ್ಪ ಪಾರ್ಟಿ ಮಾಡುವ ಮುನ್ನ ಕುಡಿಯುತ್ತ ಗೆಳೆಯರಿಗೆ ಹೇಳುವಾಗಲೆಲ್ಲ ಅವರ ಮುಖಗಳಲ್ಲಿಯ ನರಗಳ ರಕ್ತ ಕಡಿಮೆಯಾಗುತ್ತಿತ್ತು. ಮುಖ ಒಣಗಿಸಿಕೊಂಡು ಅವರು 'ನಾವೆಲ್ಲ ಒಂದೇ ಅಲ್ಲವೇನೋ. ಲಿಂಗಾಯಿತರೆಲ್ಲ ಒಂದs' ಎಂದು ಹೇಳಿ ಗ್ಲಾಸು ಎತ್ತುತ್ತಿದ್ದರು ಇನ್ನಷ್ಟು ಹೊತ್ತು ಬಿಟ್ಟರೆ 'ಇಡೀ ಮನುಷ್ಯರೆಲ್ಲ ಒಂದೇ ಜಾತಿ' ಎಂದು ಅವರು ಹೇಳುತ್ತಾರೆ ಎಂದುಕೊಂಡು ಶೇಕಪ್ಪನೂ ಗ್ಲಾಸು ಎತ್ತುತ್ತಿದ್ದ. ಈಗ ಚರ್ಚೆ ಸಮಾಜದ ಅಭಿವೃದ್ಧಿ, ಕ್ರಾಂತಿ ಮುಂತಾದವುಗಳನ್ನು ದಾಟಿ ಹೆಣ್ಣು. ಅವಳು ಆ ಸಿನಿಮಾದಲ್ಲಿ ಹೀಗೆ ಮಾಡಿದ್ದಾಳೆ, ಇವಳು ಈ ಸಿನಿಮಾದಲ್ಲಿ ಹೀಗೆ ಮಾಡಿದ್ದಾಳೆ, ಮೊನ್ನೆ ಎದುರು ಮನೆಯವಳ ಮೊಲೆ ನೋಡಿದೆ ಎಂದು ಕಾಮ, ಭೋಗ, ಸುಖ, ಮನುಷ್ಯನ ಉದ್ದೇಶ, ಮನುಷ್ಯನಿಗೆ ಸುಖದ ಅವಶ್ಯಕತೆಗಳ ಕಡೆಗೆ ತಿರುಗುತ್ತಿತ್ತು. ಬಂಡಾಯ ಬೇರೆ, ಸುಖ ಬೇರೆ ಎಂದು ನಡುವೆ ಗೆರೆ ಎಳೆಯುತ್ತಿದ್ದರು.

ತನ್ನ ವಿಚಾರಗಳ ಬಗ್ಗೆ, ಈ ದೇಶದಲ್ಲಿ ಜಾತಿ ಮತ್ತು ವೃತ್ತಿಗಳು ತಳುಕು ಹಾಕಿಕೊಳ್ಳುವ ಬಗ್ಗೆ, ವ್ಯಕ್ತಿಯ ಬೆಳವಣಿಗೆ ಬಗ್ಗೆ ಶೇಕಪ್ಪ ಕಾಲೇಜ ಮಾಸ್ತರನಾದ ಮೇಲೆ ವಿಚಾರ ಮಾಡುತ್ತಿರುವಾಗ ಅವನ ಕೊರಳಿಗೆ ಮತ್ತೊಂದು ಸಮಸ್ಯೆಯಾಗಿ ಬಿದ್ದದ್ದು ಅವನ ಮದುವೆಯ ವಿಚಾರ. ಅಪ್ಪ ಸತ್ತ ವರ್ಷ ಮದುವೆಯಾದ ಅಣ್ಣಂದಿರು ಹೊಲ, ಮನೆ, ಟ್ರ್ಯಾಕ್ಟರ್ ಮಾಡಿಕೊಂಡು ತಮ್ಮ ತಮ್ಮ ಸಂಸಾರದಲ್ಲಿ ಮುಳುಗಿ ಈಗ ಅನೇಕ ಮಕ್ಕಳುಗಳನ್ನು ಹುಟ್ಟಿಸಿದರು. ಗಡಗಿ ಮಾಡುವ ಈ ಮನೆ ಬಿಟ್ಟು ಹೊಸ ಮನೆ ಹಿಡಿದಿದ್ದರು. ಅವ್ವ ಇನ್ನೂ ಹಳೆಮನೆಯಲ್ಲೇ ಇರುತ್ತಿದ್ದು ತನಗೆ ಕೈಲಾದಷ್ಟನ್ನು ದುಡಿಯುತ್ತಿದ್ದಳು. ಅವಳ ಗಡಗಿಯ ರೊಕ್ಕದ ಜೊತೆಗೆ ಅವಳು ಹಲವು ಭವಿಷ್ಯಗಳನ್ನೂ ಕಟ್ಟಿದ್ದಳು. ತಾನು ದುಡಿದು ಕೂಡಿಟ್ಟ ಹಣದಿಂದ, ಮಗ ನೌಕರಿಯಿಂದ ಕೊಟ್ಟಿದ್ದಲ್ಲ, ಒಂದು ಬಂಗಾರದ ಸರ ಮಾಡಿಸಬೇಕು. ಆ ಸರವನ್ನು ಅವಳ ಪ್ರೀತಿಯ ಅಣ್ಣನ ಮಗಳ ಕೊರಳಿಗೆ ಹಾಕಿ ಗಂಗೆ ಬಾರೆ, ಗೌರಿ ಬಾರೆ, ಈ ಮನೆಯ ಲಕ್ಷ್ಮಿ ಬಾರೆ ಎಂದು ತನ್ನ ಪ್ರೀತಿಯ ಶೇಕುನ ಮನ ತುಂಬಿಸಬೇಕು. ಗಂಡ ಸತ್ತುಹೋದಮೇಲೆ ಇಷ್ಟು ವರ್ಷ ಬಾಳಿ ಒರಟು ಒರಟಾಗುತ್ತಿರುವ ಕೈಗಳಿಂದ ಗೌರವ್ವನ ಗಲ್ಲ ಹಿಡಿದು ಲಟಕ ಹೊಡದು ದೃಷ್ಟಿ ತೆಗೆಯಬೇಕು. ಮಗ–ಸೊಸೆ ಮಾಲಾಕಾಡುವ ಶಬ್ದಕ್ಕೆ ಸಂತೋಷಪಡಬೇಕು. ಅವ್ವನ ಕನಸುಗಳಿಗೆ ಎಣಿಕೆಯೇ ಇರಲಿಲ್ಲ. ಬಹಳಷ್ಟು ಕಲಿತಿರುವ ಮಗ ಗೌರವ್ವನನ್ನು ಒಲ್ಲೆ ಎಂದಾನು ಎನ್ನುವ ಭೀತಿಯಿದ್ದರೂ ಕೂಡ 'ಶೇಕು ನೀ ಏನೂ ತಿಳಕೊಬ್ಯಾಡ, ಆಕೀನೂ ಕಲಿತಾಳ. ಅವರು ಎಂದೂ ಕುಂಬಾರಿಕೆ ಮಾಡಿದವರಲ್ಲ. ಗೌಡ್ರ ಇದ್ಹಂಗ ಅದಾರು...ನಮ್ಮ ಅಣ್ಣನ ಸಂಬಂಧ ಒಲ್ಲೆನಬ್ಯಾಡ' ಎಂದಳು. ಶೇಕಪ್ಪ ತಾಯಿಗೆ

ಸಂತೋಷ ತರುವುದಕ್ಕೆ ಒಲ್ಲೆ ಅನ್ನಲಿಲ್ಲ. ಎಲ್ಲಿತ್ತೋ ಅಪ್ಪನಂತಹ ಕೆಮ್ಮು ಶೇಕಪ್ಪನ ಮದುವೆಗೆ ಕಾದಂತಿತ್ತು. ಮರುದಿನವೇ ಅವ್ವನ ಗಂಟಲಕ್ಕೆ ತನ್ನ ಸೆರಗ ಸುತ್ತಿತ್ತು.

ವರ್ಷಮುನ್ದಕ್ಕೂ ಹೋಗವ ಕೆಮ್ಮಿಗೆ ಅವ್ವನ ಮೈಯ ಕಸುವೆಲ್ಲ ಹೋಗಿ ಎಲುಬಿನ ಕಡ್ಡಿಯಂತಾದಳು. ಅಪ್ಪನಂತಹ ಕೆಮ್ಮು ತನ್ನೊಳಗೆ ಇಣುಕಿದ್ದಕ್ಕೆ ಅವಳು ಅರ್ಧ ಶಕ್ತಿ ಕಳೆದುಕೊಂಡಿದ್ದಳು. ಅವ್ವನಿಗೆ ಉಪಚರಿಸಲೆಂದು ಗೌರವ್ವನನ್ನು ಶೇಕಪ್ಪ ಒಂದೆರಡು ತಿಂಗಳು ಇಲ್ಲೇ ಬಿಟ್ಟ. ಅವ್ವ ಈಗ ತಾಸುಗಟ್ಟಲೇ ಕೆಮ್ಮುತ್ತಿದ್ದಳು. ಗಂಟಲ ಕಫವನ್ನು ಗ್ಯಾರಿ ಉಗಳಿ ಅದರ ಮೇಲೆ ಅಂಗಳದ ಮಣ್ಣು ಹಾಕುತ್ತಿದ್ದಳು. ತಾನೇ ಅದನ್ನು ಸ್ವಚ್ಛ ಉಡುಗಿ ನೀರು ಚಿಮುಕಿಸುತ್ತಿದ್ದಳು, ರಾತ್ರಿ ಒಮ್ಮೊಮ್ಮೆ ಕೆಮ್ಮು ಜೋರು-ಆದಾಗ ಹೊರಗಿನ ಕಟ್ಟೆಯ ಮೇಲೆ ಬಹಳಷ್ಟು ಹೊತ್ತು ಕೂತು ದಮ್ಮು ಆರಿಸಿಕೊಳ್ಳುತ್ತಿದ್ದಳು. ಸೊಸೆ ಗೌರವ್ವನಿಗೆ 'ಒಂದು ಚರಗಿ ಬಿಸಿನೀರು ಇಟ್ಟು ನೀ ಮಕ್ಕೊಂಡ ಬಿಡವ್ವ' ಎಂದು ಹೇಳಿ ಸೊಸೆ ತನ್ನ ಜೊತೆ ಯಾಕ ನಿದ್ದೆ ಹಾಳು ಮಾಡಬೇಕು ಎಂದು ದೊಡ್ಡ ಚರಿಗೆಯಲ್ಲಿ ಸುಡುಸುಡು ಬಿಸಿನೀರು, ರವಾ ರವಾ ಎನ್ನುತ್ತಿದ್ದ ಗಂಟಲು ಶಮನಕ್ಕೆ ಇಪ್ಲಿ ಅರ್ಕ ಬಾಟಲಿ ಇಸಿದುಕೊಂಡು ಇಟ್ಟಿರುತ್ತಿದ್ದಳು. ಒಂದು ರಾತ್ರಿ ಅವಳು ಕಟ್ಟೆಯ ಮೇಲಿಂದ ಕೆಮ್ಮು ಮುಗಿಸಿ, ಮೈಯಲ್ಲಿ ಚಳಿ ತುಂಬಿಕೊಂಡು ಇನ್ನು ಕೌದಿ ಹೊದ್ದು ಮಲಗಿದರಾಯಿತು ಎಂದು ಒಳಹೋದವಳಿಗೆ ಜೀವ ಗಕ್ಕನೇ ನಿಂತಂತಾಯಿತು. ಆರಾಮವಿಲ್ಲದ ಅವ್ವನನ್ನು ನೋಡಲು ಬಂದಿದ್ದ ತನ್ನ ಮಾಮಾನ ಮಗನಿಂದ ಗೌರವ್ವ ಜಂಪರ ಬಿಡಿಸಿ ಮೊಲೆ ಹಿಸುಕಿಸಿಕೊಳ್ಳುತ್ತಿದ್ದಾಳೆ. ಅವ್ವ ಮತ್ತೆ ಹೊರಗೆ ಕಟ್ಟೆಯ ಮೇಲೆ ಬಂದು ಕುಳಿತು ಎದೆಯ ದಮ್ಮು ಆರಿಸಿಕೊಳ್ಳತೊಡಗಿದಳು. ಅವಳ ಸಿಟ್ಟೆಲ್ಲ ಅವಳ ಸಾವಾಗ ತೊಡಗಿತು.

'ಏ ರಂಡಿ, ನಿನ್ನನ್ನ ನನ್ನ ಮಗಳಂಗ ನೋಡಿಕೊಂಡಿದ್ನೆಲ್ಲ! ಹೊಳ್ಯಾಗ ಹುಣಸಿಹಣ್ಣು ತೊಳೆದಂಗೆ ಮಾಡಿದಿ. ನನ್ನ ಮುಟ್ಟಬ್ಯಾಡ. ನಾ ಹೀಂಗs ಸಾಯ್ತೀನಿ' ಎಂದು ಅವ್ವ ಮರುದಿನ ಎದೆ ಬಡಿದುಕೊಳ್ಳತೊಡಗಿದಳು. ಗೌರವ್ವ ಅಳುತ್ತ ಬಗ್ಗಿದಾಗ ಅವಳ ಕೂದಲು ಹಿಡಿದು ಜೋರಾಗಿ ಹಿಂದೆ ದೂಡಿದಳು. ಸೊಸೆಯ ತಲೆಯಲ್ಲಿ ರಕ್ತ ಒಸರಿತು. ಅವಳು ಬಿಸುಗುಟ್ಟುತ್ತ ಹಾಗೆಯೇ ಕೂತಳು. ಈ ಮುಂದಂಕಿಯ ಮುಂದೆ ತನ್ನ ಪ್ರೀತಿಯ ಗುಟ್ಟು ಒದರಿ ಏನು ಪ್ರಯೋಜನವೆಂದು ಸುಮ್ಮನಾದಳು, ಮನುಷ್ಯರ ಮನಸ್ಸುಗಳನ್ನು ತಿಳಿದುಕೊಳ್ಳುವ ಶಕ್ತಿ ಯಾವ ತಾಯಿಗಿದ್ದೀತು! ಕಾಮದ ಗುಟ್ಟುಗಳು ಪ್ರೀತಿಯ ಗುಟ್ಟುಗಳಿಗಿಂತ ರಹಸ್ಯವಾಗಿರುತ್ತವೆ. ಒಳಗೊಳಗೆ ಹಾವಿನಂತೆ ಎಚ್ಚರವಿರುತ್ತವೆ.

ಅವ್ವನ ಆರೋಗ್ಯ ತೀರ ಹದಗೆಟ್ಟಾಗ ಬಂದ ಶೇಕಪ್ಪ, 'ನನ್ನ ಚಿಂತ ನಿನಗ್ಯಾಕ. ಆಕೀನ ಮೊದಲು ಕೊಲ್ಲು' ಅವ್ವ ಅಂದಳು,

'.......'

'ಯಾಕ ಹೆದರತಿ ಏನು?'

'ಆಕೀನ ಹೊಡೆದ ಬಡದ ಮಾಡಿದರ ಏನ ಬರ್ತದ, ಆಕೀ ಮನಸ ಹಂಗ ಐತಿ ಅಂದ್ರ ನಾವ್ಯರ ಏನ ಮಾಡಾಕ ಆಗ್ತದ. ಅವರವರ ಹಾದಿ ಅವರವರಿಗೆ...'

'ನೀ ಎಂಥಾ ಗಂಡಸು!'

ಅವ್ವನ ಮಾತಿಗೆ ಅವನೂ ಏನೂ ಹೇಳಲಿಲ್ಲ. ತಾನು ಕಲಿಸುವ ವಿಷಯಗಳಿಗೂ, ತಾನು ನಡೆಸಬೇಕಾದ ಆಚರಣೆಗಳಿಗೂ ಇರುವ ಅಂತರಗಳು ಅವನ ಮನಸ್ಸು ತಿನ್ನು ತ್ತಿದ್ದವು. ಅವ್ವನ ನ್ಯಾಯ, ತನ್ನ ನ್ಯಾಯ, ಅವ್ವನ ನಂಬಿಕೆ, ತನ್ನ ನಂಬಿಕೆ ಮತ್ತು ಅವುಗಳು ಹುಟ್ಟು ಹಾಕುವ ಪರಿಣಾಮಗಳು ಅವನಿಗೆ ಗೊಂದಲ ನಿರ್ಮಿಸತೊಡಗಿ ದವು. ಹೊತ್ತು ಹೆತ್ತು ಕಾಡಿ ಬೇಡಿ ಬೆಳೆಸಿದ ಅವ್ವ ತನ್ನನ್ನು ಅವಮಾನಗೊಳಿಸಿದ್ದೂ ಅವನಿಗೆ ಕೆಟ್ಟೆನಿಸಲಿಲ್ಲ. ಬದುಕಿನ ಆತಂಕಗಳು ಮತ್ತು ಸವಾಲುಗಳಷ್ಟೇ ಅವನ ಮುಂದಿದ್ದವು.

ಅವ್ವ ಸಾಯುವಾಗ ಕಣ್ಣೀರು ತಂದಿದ್ದಳು. ಶೇಕಪ್ಪ ಕಣ್ಣೀರು ಒರೆಸಿದ. 'ನೀ ಚಿಂತಿ ಮಾಡಬ್ಯಾಡ. ನಾ ಆರಾಮ ಇರ್ತೀನಿ. ಯಾವಾಗ್ಲೂ ಆರಾಮ ಇರ್ತೀನಿ', ಅವನ ಮಾತಿಗೆ ಅವಳಲ್ಲಿ ಯಾವುದೇ ಉತ್ತರವಿರಲಿಲ್ಲ.

ಆ ಮಾತುಗಳು ಅವನಿಗೆ ಈಗ ಮತ್ತೆ ನೆನಪಾದವು. ಅವ್ವನ ನೆನಪು ಒತ್ತರಿಸಿ ಬಂತು. ಬಹಳಷ್ಟು ದಿನಗಳಾಗಿತ್ತು. ಅತ್ತಿರಲೇ ಇಲ್ಲ. ಕೌದಿಗೆ ಕಣ್ಣೀರು ಒರೆಸಿದ. ಅವ್ವ ಸತ್ತ ಮೇಲೆ ಈ ಹಂಚಿನ ತಾಟಿನ ಮೇಲೆ ಎಷ್ಟು ಮಳೆ ಬಿದ್ದಿರಬಹುದು ಎಂದುಕೊಂಡ. ಅವ್ವ ಉಸುರಿದ ಶಬ್ದಗಳು, ಅವಳ ಅವಮಾನಗಳು ಯಾವ ಯಾವ ಮೂಲೆಯಲ್ಲಿ ಕೂತಿವೆ ಎಂದು ಕಣ್ಣಾಡಿಸಿದ. ಅಪ್ಪ ರಾತ್ರಿ ಗಡಗಿ ಬಡಿಯುತ್ತ ಚಿಮ ಣಿಯ ಬೆಳಕಿನಲ್ಲಿ ಅವನನ್ನು ಓದಿಸುತ್ತಿದುದು ನೆನಪಾಯಿತು. ಅಪ್ಪ-ಅವ್ವರ ಈ ಮನೆಯನ್ನು ಅವನು ಕೊಂಡುಕೊಂಡುದು ತೃಪ್ತಿ ತಂದಿತು, ಅಣ್ಣ-ತಮ್ಮಂದಿರು ಬೇರೆ ಬೇರೆಯಾಗುವ ಸಂದರ್ಭದಲ್ಲಿ ಶೇಕಪ್ಪ ಈ ಮನೆ ತನಗೆ ಬೇಕೆಂದು ಉಳಿಸಿ ಕೊಂಡಿದ್ದಾನೆ, ದೂರದ ಪಟ್ಟಣದಿಂದ ಇಲ್ಲಿ ಬಂದು ಮಲಗಿದ್ದಾನೆ. ಊರಲ್ಲಿ ತನ್ನ

ಚರಿತ್ರೆ ಇದೆ. ತಾನು ಬೆಳೆಸಿದವರ ಪಳೆಯುಳಿಕೆಗಳಿವೆ. ತನ್ನ ಅವಮಾನಗಳಿವೆ. ತನ್ನ ಬಂಡಾಯವಿದೆ ಎಂದು ಮನೆಯ ಸೆಗಣಿ ನೆಲದ ತುಂಬ ಬರಿ ಮೈಯಿಂದ ಉರುಳಾಡಿ ಮಣ್ಣು ಹತ್ತಿಸಿಕೊಳ್ಳುತ್ತಾನೆ ಬೆಳಗಿನ ಜಾವಕ್ಕ ಕಣ್ಣು ತುಂಬಿ ಬರುತ್ತವೆ.

ಶೇಕಪ್ಪ ಈ ಮನೆ ತೆಗೆದುಕೊಂಡಿದ್ದಾನಂತೆ, ಇಲ್ಲಿ ತನ್ನ ನೆನಪ ಇಡುತ್ತಾನಂತೆ. ತನ್ನ ಕನಸ ಕಟ್ಟುತಾನಂತೆ, ಗೋಡೆಗಳು ಮತ್ತೆ ಮಾತಾಡಲು ತೊಡಗಿದವು.

---



---

# ಹಾದರದ ಕಥೆಯುಂಬೋ ಕಥೆ

ಆರ್. ಮೋಹನ ನಾಗಮ್ಮನವರ

ಮುತ್ತಿನೂರಿನಲಿ ಮುದುವಿ ಮುತ್ತವ್ವನಿಗೊಬ್ಬ ಮಗನಾಗಿ ಆ ಮಗಳು ಚೆಲುವಮ್ಮನಿಗೆ ಕಂದ ಶಿವರಾಮ ಮಗನಾಗಿ, ಚಂದ್ರನಾಗಿ ಹೊಳೆದು, ಇಂದ್ರನಂತೆ ಬೆಳೆದು ಮುತ್ತಿನೂರಿಗೇ ಮುತ್ತಾದ. ನೆಲಬಿಟ್ಟು ಮೇಲೆದ್ದು ಮೊಣಕಾಲ ಮೇಲೆ ಜಗ ದಾಟುವ ವಯಸಾಗಿ ಬಟ್ಟಲು ಕಣ್ಣುಗಳಿಂದಲಿ ಕನಸು ಮೂಡತೊಡಗಿದಾಗ, ಮೂಡಲ ಸೀಮೆಯ ಮುತ್ತವ್ವನಿಗೆ ಚಿಂತೆ ಮೂಡಿ, ಮುದುಕಿ ಮುತ್ತವ್ವ ಸೂರ್ಯನೆಂಬೋ ದೇವರಿಗೆ ಕೈ ಮುಗಿದು ಸಂಜೆ ಮುಂಜೆ ದಿನಗಳೇಕಾಗಿ ಬಕುತಿಯಿಂದ ಹರಕೆ ಹೊತ್ತೊಂದು ದಿನ ಮುಗಿಲನೂರಿನಿಂದ ನೆಲಕೆ ಬಂದು ಕೇಳಿದ್ದ,

"ಯಾಕವ್ವಾ ಬಕುತೆ, ಏನವ್ವಾ ಚಿಂತೆ"

"ಮಮ್ಮಗ ಮುದ್ದಾಗೇ ಬೆಳೆದಾನೆ ನನದೇವಾ, ಕನಸತುಂಬಿ ಮನಸ ತುಂಬಿ ನಂಗವನ ಧ್ಯಾನವಾಗಿ, ಅವ ಧನ್ಯನಾಗಿ ದವುಳವನಾಗಿ ಬೆಳೆಯಲೆಂದು ಮದುವೆ ಮಾಡುದುದ್ಕೃತಿ ದೇವ, ಜಗದೆಲ್ಲ ದಿಕ್ಕುಗಳಲಿರದ ಹೊಟ್ಟೆಯಲಿ ಹುಟ್ಟಲಾರದಂತ ಹೆಣ್ಣು ಫಲವೊಂದು ಕೊಡು ದೊರೆಯೇ, ಬಾಳೆಲ್ಲ ಬೆಳಕಾಗಿ, ಬೆಳಕ ತುಂಬ ಹೊನ್ನ ಮಳೆ ಬಂದು ಸುಖ ಹೊಳೆಯಾಗಿ ಹರಿಯಲೆಂದು ಹರಸಪ್ಪ ದೇವ"

ಸೂರ್ಯದೇವನಿಗದೆ ತುಂಬಿ ವರದ ತೋರಿಕೆಯಲ್ಲಿ ಮುತ್ತವ್ವನಂಗೈಲಿ ಲಿಂಬೆಹಣ್ಣನಿಟ್ಟು ಕಟ್ಟು ನಿಟ್ಟನೆಲ್ಲ ಒಟ್ಟಿಗೆ ಹೇಳಿದ,

'ಸಂಜೆಗವಳದ ವೇಳೆಯಲಿ, ಶಿವರಾಯನ ನೆತ್ತಿಯ ಮೇಲೆಲ್ಲ ಹೋಳು ಮಾಡಿ ಹರಿದು ನೋಡು, ಸುರಿವ ರಕ್ತವ ನೆಲಕಿಳಸ ಬೇಡ. ಜಗಕಾಣಿಸಬೇಡ, ಹಣ್ಣನುಡಿಯಿಂದ ಬರುವ ಹೆಣ್ಣು ಕೂಸು ಕಂದ ಶಿವರಾಯನೊಡನೆ ಬದುಕಿನಂಗಳದಲ್ಲಿ ಹೆಜ್ಜೆ

ಯೂರಿ ಸುಖದ ಮಳೆ ತರುವಳು. ವರಕೊಟ್ಟ ಮಹದೇವ ಸೂರ್ಯ ಮರೆಯಾಗಿ ಮನೆಗೆ ಮುತ್ತವ್ವ ಬಂದಳೆಂದೀ ವರಪರಸಂಗದಿಂದ ಹಾದರದ ಕಥೆಯುಂಬೋ ಕಥೆ ಮೊದಲಿಟ್ಟಿತು.

ಮತ್ತೆ ಮೊಮ್ಮಗನನ್ನು ಕಂಡೆನೋ ಕಾಣೆನೋ ಎಂಬ ದಾವಂತದಲಿ ಮುಂದುಕಿ ಅಡವಿಯಿಂದ ಊರಿಗೆ ಮರಳಿ ಬಂದು ಎದುರಾದ ಮೊಮ್ಮಗನ ಮೈದಡವಿ ಮುಂದ್ದಿಸಿ, ಮಗಳು ಚೆಲುವಮ್ಮನಿಗೆ ಸೂರ್ಯ ಪರಮಾತನುನಿತ್ತ ವರದ ಫಲವ ಕೈಲಿಟ್ಟು ಗರವದಿಂದ ಹೇಳಿದಳು.

"ನೋಡಿಲ್ಲಿ ಮಗಳೇ, ಮೊಮ್ಮಗನೆಂಬೋ ಗೊಂಬೀಗೆ ಮತ್ತೊಂದು ಹೆಣ್ಣು ಗೊಂಬೀ ತಂದೀನಿ. ಏಳೇಳು ಸಾಗರದ ಸಕುತಿ ತುಂಬಿ, ಹಗಲು ಬೆಳಕಿನ ಹೆಡಮುರುಗೆ ಕಟ್ಟಿ ಹುತ್ತಗಟ್ಟದ ಕಾವಿ ಮೈ ತುಂಬಿಕೊಂಡ ಪರಮಾತಮನೀ ಫಲವ ಜಗುಲಿಯೊಳ ಗಿಟ್ಟು ಭಕುತಿಯಿಂದ ಪೂಜೆ ಮಾಡು".

ಉಟ್ಟ ಬಟ್ಟೆಯನೆಲ್ಲ ತೆಗೆದು ಚೆಲುವಮ್ಮ ಜಳಕ ಮಾಡಿ ಜಗುಲಿಯೇರಿ ಕೈ ಮುಗಿದು ನಿಂದು ಸೇವೆಗೈದಳು. ಜಗುಲಿ ಮನೆಯಲ್ಲಿ ಮಬ್ಬು ಬೆಳಕನು ದೇವರೊಂದಿಗೆ. ದೇಶಾಂತರ ಹೋದ ಗಂಡನನ್ನು ನೆನೆದಳು. ಏಕೋ ಮೈ ಮುರಿದು ಮೊದಲ ರಾತ್ರಿಯ ಕನಸ ಕಂಡಳು. ಮನದ ಮುಗಿಲ ನೆತ್ತಿಯ ಮ್ಯಾಲ ನೂರು ಕನಸಿನ ಚಿತ್ತಾರ ಮೂಡಿ ತೊಡೆಗುಂಟ ಗೆಜ್ಜೆ ಸಾಲುಸದ್ದು ಮಾಡಿ, ಸೀರೆಗಂಟನಲಿ ಸಡಲಿ ಕೆಯ ಜೊತೆ ಜೊತೆಗೆ ನೂರು ಕನವರಿಕೆ.

ಸಂಜೆಗವಳದ ಹೊತ್ತು ದಾಟಿ ಗಂಗಾಳದಂತೆ ಚಂದ್ರಮ ಚುಕ್ಕೆಗಳ ಜೊತ ಚೆಂಡಾಡುವಂತೆ ಬಂದ ಬೆಳದಿಂಗಳಿನಲ್ಲಿ ಮುತ್ತಮ್ಮ ಕಂಡ ಶಿವರಾಮನ ನೆತ್ತಿಯ ಮ್ಯಾಲೆ ಲಿಂಬೆ ಹಣ್ಣನಿಟ್ಟು ಕತ್ತಿಯಿಂದ ಹೋಳು ಮಾಡಿದರು. ಹಳದಿ ಹಳದೀ ಅರಿಷಿಣದಂತೆ ಫಲದೊಳಗೆ,ಜೊತೆಗೆ ನೆತ್ತರೋಕುಳಿಯ ತುಂಬಿ ಕೆಂಪೋ ಕೆಂಪು, ಮೂಡಲಗೆಂಪು, ಪಡುವಲಗೆಂಪು, ಹಣ್ಣು ಹಾಗಲದ ಕೆಂಪು!

ಹಾಗೆರಡು ಹೋಳು ಮಾಡಿದಂತ ಫಲದಿಂದ ಏನೊಂದು ರಕುತ ಕೆಳಗೆ ಬೀಳದಂತೆ ಕಣ್ಣಾಗಿ ಕಾದು. ಮುತ್ತವ್ವ ಮತ್ತು ಚೆಲುವಮ್ಮ ಪೂರ್ಣ ರಾತ್ರಿ ಜಾಗರಣೆ ಮಾಡಿ ಮತ್ತೆ ಮತ್ತೆ ಭಕುತಿಯಿಂದ ಪೂಜೆ ಸಲ್ಲಿಸಿ ಮೈ ಮರೆತ ಹೊತ್ತಲ್ಲಿ ಹನಿ ರಕುತ ವೊಂದು ನೆಲಕುರುಳಿ, ಉರುಳುತಾ ಹೋಗಿ ಹಿತ್ತಲ ಬಾಗಿಲಿನ ಅಗಳಿ ಗೂಟಕಂಟಿ ನಿಂತು, ಹನಿ ರಕುತದ ಹೊಟ್ಟೆಯಿಂದ ಹಾವ ಮರಿಯೊಂದು ಹೊರಬಂದು ಬೆಳ್ಳಾನ

ಬೆಳ್ಳಿ ಬೆಳದಿಂಗಳ ಕಿರಣ ಬೆಳಕಿಂಡಿಯಿಂದ ಜಾರಿ ಬಂದಲ್ಲಿ ಹೆಡೆಯಾಡಿಸಿ ಮುಂದ ದಿಂದ ಆಡತೊಡಗಿತ್ತು. ಹಾವ ಮರಿಯು ಹೆಡೆಯೊಳಗೆ ಮಂದವಿತು. ಸೊಬಗಿತ್ತು. ಮಿಂಚ ಮರಿಯಂತೆ, ಸಿಡಿಲ ಕೂಸಂತೆ ಗೋಧಿ ಬಣ್ಣದ ವರ್ಣವದ ತಾಳಿ ಜಗಕೆ ಬಂದ ಮರಿ ನಾಗೇಂದ್ರ ಒಗಟು ತುಂಬಿಕೊಂಡ ಉಗ್ರಾಣದಂತೆ ಹಿತ್ತಲಗಳಿಯ ಗೂಟಕೆ ಸೇರಿಕೊಂಡ.

ಮಧ್ಯರಾತ್ರಿಯು ದಾರಿ ಕೊನೆಯ ಪ್ರಹರದ ಹೊತ್ತು, ಪರಮಾತ್ಮನ ಫಲ ಹಿಡಿ ಯಂತ ಹಣ್ಣು ಹೆಡಿಗೆಯಷ್ಟು ಅಗಲಾಗಿ ಕೆಂಪು ಕೊಳದಡಲಿಂದ ಮಿಸುಕು ಮಾಡಿ, ರಸಕ್ಕೆ ಮುದ್ದೆ ಮಾಂಸ ಮೂಡಿದಂತಾಗಿ ಪರೆ ಸೀಳಿಕೊಂಡು ಹೆಣ್ಣು ಕೂಸು ಹೊರಬಂದು, ಮುತ್ತಮ್ಮ, ಚೆಲುವಮ್ಮನಿಗೆ ಸ್ವರ್ಗ ಮನೆಯಂಗಳಕ್ಕೆ ಬಂದು ಅಂಗೈಗೆ ಸೇರಿಕೊಂಡು, ರಾಜರೋಲುಗದಲ್ಲಿ ಪರದಾನಿಯಾದಷ್ಟೆ ಖುಷಿಯಾಗಿ ಕೂಸನ್ನೆತ್ತಿ ಕುಣಿದರು. ಅದೇ ಬಂದ ಕಂದ ಅಳಲೂ ಇಲ್ಲ ನಗಲೂ ಇಲ್ಲ. ಮಣಿದು ಕೊಂಡಂತೆ ಮೋರೆಯು ಬೊಗಸೆಗಣ್ಣಿನಲಿ ಹುತ್ತಗಟ್ಟಿದ ಭಾವ ಯಾರೋ ಒಳ ಕುಳಿತು ಕೈ ಮಾಡಿ ಕರೆಯುತ್ತಿರುವಂತ ಗೂಢತೆಯಿಂದಾಗಿ ಮನದಲ್ಲೇನೋ ಚಿಂತಿಸಿ ಕಂದನ ಬೆಳಕಿಗೆ ಹಿಡಿದು ನೋಡಿದರೆ ಅಲ್ಲಿ ಹುತ್ತದಂತ ನೆರಳು! ಕಾಲ ನೋಡಿದಳು. ಕೈಯ ನೋಡಿದಳು. ಅಂಗೈಯ ಬಿಡಿಸಿದಳು, ಅಲ್ಲಿ ಪದುಮ ರೇಖೆ! ಕಾಮಿಂಗಣ್ಣನ ಮೇಲೆ ಕೂಡು ಹುಬ್ಬು ಗುಲಾಬಿಯಂತ ಕೆಂಪು ಮೈಬಣ್ಣವಾಗಿ ಏನಾದರೇನು ಶಿವಕೊಟ್ಟ ಕರುಣೆ ಎಂದುದುಕೊಂಡು ಮೊಮ್ಮಗನನ ಹೆಣ್ಣು ಗೊಂಬೆಯ ಮುತ್ತಿಕ್ಕಿದಳು.

ಸೊಸೆ ಬಂದ ಸಡಗರದಲ್ಲಿ ಚೆಲುವಮ್ಮ ಬೆಳ್ಳಂಬೆಳಗೂ ಜೋಗುಳ ಹಾಡಿ, ಅಂಕಣ ಕ್ಕೊಂದು ತೊಟ್ಟಿಲ ಕಟ್ಟಿ, ತೊಟ್ಟಲಿಗಾಕಿ ಕಣ್ಣ ತುಂಬ ಕನಸ ತುಂಬಿ ಮರುದಿನ ಊರೆಂಬೋ ಊರಿಗೆ ಊಟ ಹಾಕಿ ದೊರೆಯ ಬೊಕ್ಕಸಕ್ಕೆ ಕಾಣ್ಕೆ ಎಂದು ಊರ ಗೌಡನಿಗೆ ಮತ್ತೆರಡು ತೊಲೆ ಬಂಗಾರ ಕೊಟ್ಟು ಊರೆಲ್ಲ ಸೊಸೆ ಬಂದ ಸಡಗರ ಹಾಡಿಕೊಂಡಳು. ತೊಟ್ಟಿಲ ಸೊಸೆಯು ಮಗ್ಗುಲಿ ಮಗ ಶಿವರಾಮನ ಕುಳ್ಳಿರಿಸಿ ಆರತಿಯೆತ್ತಿದಳು. ಕಂಡೋರ ದೃಷ್ಟಿಯಾಗಬಾರದೆಂದು ಮಂದುಕಿ ಕಣಕದ ಗೊಂಬೆಗೆ ನಿಂಬೆಹಣ್ಣ ಚುಚ್ಚಿ, ಕುಂಕುಮ ಬಂಡಾರ ಬಡಿದು, ಹೊರಗಿನಗಸೆಯ ಮೂರು ದಾರಿಗೆ ನಿವಾಳಿ ಚೆಲ್ಲಿ ನಾಕೂ ದಿಕ್ಕಿನ ದೆವ್ವಗಳ ಬಂದು ಮಾಡಿ ಕೆಟ್ಟ ವರ ನೆರಳು, ಕೆಟ್ಟವರ ಕಣ್ಣು ಮಗ ಸೊಸೆಯ ಮೇಲೆ ಬೀಳದಂತೆ ಕಣ್ಣಿಗೆ ಕಣ್ಣಾಗಿ ಜೋಪಾನ ಮಾಡುತ್ತಾ ಇರಲಾಗಿ ಸೊಸೆಗೊಂದು ಹೆಸರು ನಾಗವ್ವನಾಗಿ ಇರು ತಿರಲು,

ಮಗ ಶಿವರಾಯನಿಗೆ ಕುದುರೆಯೇರುವ ಕನಸು, ರಾತ್ರಿ ಮಲಗಿದರೆ ತಾನೊಂದು ಕುದುರ್ಯಾಗಿ ಓಡುತ್ತ, ಓಡುತ್ತ, ಕಾಮನಬಿಲ್ಲ ಗುಡಿಗೆ ಬಡಿದು, ಬೆನ್ನತ್ತಿದಷ್ಟು ದೂರಾಗುವ ಕಾಮನಬಿಲ್ಲು ಮೋಡದ ಗವಿಯಲಿ ಮರೆಯಾದಂತೆ ಶಿವರಾಮನಿಗೆ ಮೈ ಕೈ ತುಂಬ ಮಿಂಚಿನ ಗೊಂಚಲ ಸುತ್ತಿ ಸಿಡಿಲ ಹಾರೆಯನೆತ್ತಿ ಮುಗಿಲನಗೆದಗೆದು ಮರೆಯಾದ ಕಾಮನ ಬಿಲ್ಲ ಹೊರ ತೆಗೆದಂತೆ. ಇವನ ಪ್ರಯತ್ನ ಕಂಡು ಸೂರ್ಯ ಪರಮಾತಮ ನಕ್ಕಂತೆ ಕನಸಾಗಿ, ಸರೂರಾತ್ರಿಯಲೊಮ್ಮೆಲೇ ಎಚ್ಚರಾಗುತ್ತಾ ದಿನ ಗಳೆದಂತೆ, ಬಾಗಿನ ಮೂಗಿನ ಕೆಳಗೆ ಇರುವೆ ಸಾಲಿನಂತ ಮೀಸೆ ಮೂಡತೊಡಗಿ ಮೈ ಕೈ ತುಂಬಿ ಚೆಲ್ಲಣ ಬಿಚ್ಚಿ ಧೋತರ ಸುತ್ತತೊಡಗಿದಾಗ, ಅಲ್ಲಲ್ಲಿ ನರಹುರಿಗಟ್ಟಿ ದಿಕ್ಕ ದಿಕ್ಕುಗಳನೆಲ್ಲ ಮೀಸೆ ಗತ್ತಲ್ಲಿ ಕುಣಸತೊಡಗಿದರೆ........

ಅಂಬೆಗಾಲಿನ ನಾಗವ್ವ ಹೆಜ್ಜೆಯಿಡುವ ಹಂತವನೂ ದಾಟಿ ಬೆನ್ನ ಹುರಿ ದಾಟುವಂತ ಜಡೆ ಹೊಂದಿ ಮಿಂಚಿನ ಬಣ್ಣವನ್ನೇ ಮೈ ತುಂಬಿಕೊಂಡವಳಾಗಿ ನೋಡಿದರೆ ಕಲ್ಲಿಗೂ ಮನಸಾಗುವಷ್ಟು, ದೇವಲೋಕದ ಸುಂದರಿಯರನೂ ಮೀರಸುವಂತ ಚೆಲುವ ತುಂಬಿಕೊಂಡು ದಿನಕೊಂದು ಚೆಂದಾಗಿ ಬೆಳೆಯುತ್ತಾ, ಹಿತ್ತಲಗಳಿಯ ಗೂಟದಲ್ಲಡಗಿದ್ದು ನಾಗೇಂದ್ರನೂ ಬೆಳೆದು ಬೇಕೆಂದಾಗ ಮನುಷ್ಯ ರೂಪವ ಪಡೆದು ಯಾರು ಕಾಣದ ಹೊತ್ತಲ್ಲೆದ್ದು ಮುಗುದೆ ನಾಗವ್ವನ ಮಾತಾಡಿಸುತ್ತ ಮುದ ತುಂಬುವನು. ನಾಗೇಂದ್ರನಿಗೆ ನಾಗವ್ವ ಬೇಕಾಗಿ, ನಾಗವ್ವನಿಗೆ ನಾಗೇಂದ್ರ ಬೇಕಾಗಿ ಹದಿನಾರು ಆಕಳಿನ ಹಾಲನ್ನು ನಾಗೇಂದ್ರನಿಗೆ ಕೊಡುತ್ತಾ, ಅಂಗಳ ತುಂಬ ಕುಸುಬೆ ಕಾಳಿನಂತ ಬೆಳದಿಂಗಳು, ಸುರಿದಾಗ ಕೂಡಿ ಆಡುತ್ತಾ ನಿಂತಿದ್ದ ದಶದಿಕ್ಕುಗಳಿಗೂ ಮನದಲ್ಲಿ ಮಿತಿಮೀರಿ ಈ ಕುತೂಹಲ, ಮುಂದೇನಾಗುವುದೆಂಬುದನು ನಿರುಕಿಸತಿರಲು ಎಲ್ಲರಿಗೂ ಹರೆಯ ಬಂದು, ಹರೆಯದವರು ಮುದುಕರಾದರು.

ಮೊಮ್ಮಗನ ಮೈ ತುಂಬ ಹರೇವೂ ಹಾದಿ ಮಾಡಿ, ಹುರಿಗಟ್ಟಿ ಮೀಸೆ ಮುದುಕಿ ಮುತ್ತವ್ವ ಮೊಮ್ಮಗನ ದಿಟ್ಟಿಸುವಳು. ಶಿವರಾಯ ಶಿವಪರಮಾತ್ಮಂದೇ ರೂಪ. ಯಾವ ಬಿಡಕೆಯರ ಕಣ್ಣ ಅವನನ್ನು ಕಾಣಬಾರದು. ಮೊಮ್ಮಗಗೇ ಮದುವ್ಯಾಗೆ, ಮುತ್ತವನ ಮಕ್ಕಳಾಗಿ, ಮರಿಮೊಮ್ಮಕ್ಕಳನೆತ್ತಿ ಮುತ್ತವುಗಳಿಗೆ ಮದುವೆ ಮಾಡಿ ಕಣ್ಮುಚ್ಚ ಬೇಕೆಂದು ಬಯಕೆಯಾಗಿ ಮೊಮ್ಮಗನ ಮದುವೆಯ ಕನಸ ಕಂಡಳು.

ಶಿವರಾಯ ಮುಂಜಾನೆ ಮೂರ್ಹೊತ್ತೂ, ನಾಗಪ್ಪನ ನೋಡುವನು, ತನ್ನ ಮದುವೆಗಾಗಿ ಸೂರ್ಯಪರಮಾತಮನಿಂದ ತಂದವಳಿವಳೆಂದುಕೊಂಡು ಬೈಗೂ ಬೆಳಗೂ ನಾಗಿ ...ನಾಗಿ...ಎಂದು ಬೆನ್ನತ್ತಿ ಸುತ್ತುವನು. ಪರದಾನಿ ತೋಟದಿಂದ ನಾಗಸಂಪಿಗೆ ಹೂವ ತರುವ ಜೋಯಿಸರ ತೋಟದಿಂದ ತರುವ ದೋರೆ ಪೇರಲಕಾಯಿಯ ಕಾಲ ಕಳೆದು ಮುತ್ತೀಗ ಕೇಳುವನು.

"ಮೋಡದಿಂದ ಮಿಂಚ ತರಲೇ, ಮಲೆನಾಡ ಕಾನಿಂದ ಹುಲಿ ಹೊತ್ತು ತರಲೇನೆಂದು ಪರಪರಿಯಾಗಿ ಕೇಳುವನು."

ಏನೊಂದೂ ಕೇಳಿದರಾಕೆಗೆ ಬಾಯೇ ಬರದು. ಸುಳಿಸುಳಿಯಾಗಿ ಸುಳಿದ ಬಿಗುಮಾನ, ಸೆಟಗೊಂಡಂತೆ ಗಾಂಭೀರ್ಯ. ತಲೆಬಾಗಿ ಮೊಗ ಕೆಳಗಿಟ್ಟು ಸೆರಗಿನಲೇ ಮುಖಮರಸಿ ಕೊಳ್ಳುವ ನಾಗವ್ವನ ಮೌನದಿಂದಾಗಿ ಶಿವರಾಯನೆದೆಯಲ್ಲಿ ಮತ್ತಷ್ಟು ಪ್ರೇಮ ಉಕ್ಕುವುದು. ಪ್ರೀತಿ ಜಲಪಾತವಾಗಿ, ಭಾವಗಳ ಹೊಳೆ ಹರಿದು, ಬಣ್ಣಗಳ ಮಹಾಪೂರವೇ ನಡೆದು ಗಾಳಿಯಲೇ ತೇಲಿ ಹೋಗುವನು. ದೇವಲೋಕದೀಕೆಗೆ ಬಂಗಾರದ ಮನೆ ಕಟ್ಟಿ, ದಂತದ ತೊಲೆ ಹಾಕಿ, ವಜ್ರದ ಕುಸುರಿಯ ಮನೆಯಲ್ಲಿಡ ಬೇಕೆಂಬುದೊಂದು ಬದುಕಿನಂತಿಮ ತೀರ್ಮಾನವಾಗಿ ಹೊರಡುವನು.

ಸನಿಹ ಬಂದರೆ ಶಿವರಾಯ, ನಾಗವ್ವನಿಗೆ ಮನದೊಳಗೆ ಮುಳ್ಳಿದ್ದು ಮೈಯೊಳಗೆ ಗೊದ್ದ ಹರಿದಾಡಿದಂತೆ ಕಿರಿಕಿರಿ. ಎದೆಯೊಳಗೆಲ್ಲ ಬೆಲ್ಲದಂಟು ಮೆತ್ತಿಕೊಂಡ ಅಸಹ ನೀಯತೆ ಕಾಡಿ, ಮಾತುಗಳೇ ಮೂಕವಾಗಿ ದೂರ ಹೋಗುವವರೆಗೆ, ಸುಡುವ ತವೆ ಹಂಚಿನ ಮೇಲೆ ಚಾಪೆ ಹಾಸಿ ಕುಳಿತಂತ ಚಡಪಡಿಕೆ. ಹುಲಿ ಬೇಕೆನ್ನಿಸಲಿಲ್ಲ. ಮಿಂಚು ಬಯಕೆ ಹುಟ್ಟಿಸಲಿಲ್ಲ. ಶಿವರಾಯನೊಬ್ಬ ಕಣ್ಣ ಮರೆಯಾದರೆ ಸಾಕೆಂದು ಹಿತ್ತಲಿ ನತ್ತ ದಿಟ್ಟಿ ಹರಿಸುವಳು.

ಹಿತ್ತಲಗೋಡಿ ಮಲ್ಲಿಗೆಯ ಬಳ್ಳಿಮ್ಯಾಲೆ ಮೊಗ್ಗನರಸುವಳು. ಮನೆ ಮಾಡಿದ್ದ ನಾಗೇಂದ್ರ ಮೇಲೆದ್ದು ಮೈದಡವುತ್ತ ಕೆನ್ನೆ ಮುದ್ದಿಸುವನು. ಕಣ್ಣುಗಳಲ್ಲದೇನೋ ಸೆಳೆತ ತುಂಬಿ ಮೈಯಲ್ಲಿ ಮಿಂಚಹುಟ್ಟಿಸುವನು. ಹುಟ್ಟಿಕೊಂಡ ಮಿಂಚಿಗೆ ಶಿವ ರಾಯ ತರುವೆನೆಂದ ಮಿಂಚ ಹೋಲಿಸಿ ನೋಡುತ್ತಾ ತನ್ನೊಳಗೆ ತಾನೇ ಹಾಡಿ ಕೊಳ್ಳುವಳು.

"ಏಳು ಕಣಿವೆಯ ಹಾದಿ, ನೂರು ಯೋಜನ ದಾಟಿ ನಡೆದು ಮುಗಿಲು ಗುಂಡ್ಡವನೇರಿ ತರುವ ಮಿಂಚ್ಯಾಕೋ ಶಿವರಾಯ ಇರುವಲ್ಲೇ ಮಿಂಚಿತ್ತಿ ಬೆಳೆಯುತಾನೆ ನನರಾಯ್ನು, ತೊಡೆಸಂದಿಯಲಿ ಸಡಿಲ ಹುಟ್ಟಿಸಿ, ಗಂಡುಗ ತುಂಬಿ, ನೆಲಮುಗಿಲಿಗೇ ನನ್ನ ಹರಡಿ ಮಳೆಯಾಗಿಸುತ್ತಾನೆ ನನ್ನೊಳಗೇ ಹೊಳೆಯಾಗಿ ಹರಿಯುತ್ತಾನೆ"

ಹಾಡಿಕೊಂಡ ಹಾಡ ಕೇಳಿ ಹಾಡುವಕ್ಕಿಗಳು ದನಿಗೆ ಹೊಸದೊಂದು ರಾಗ ಜೋಡಿಸಿ ಕೊಂಡು ದಿಕ್ಕೂ ದಿಕ್ಕಿಗೆ ಹಾರಿ ಹೊಸರಾಗ ನುಡಿಯುತ್ತಾ ಜಗದ ಪ್ರೇಮದ ಕಥೆ ಯೆಂಬೋ ಕಥೆಗೆ ಹೊಸ ಬಣ್ಣ ಬರೆದು ಹಸಿರಿನಲ್ಲೊಂದು ವಾಸನೆಯ ಮೂಸುತ್ತವೇ!

ನಾಗೇಂದ್ರನೊಡನೆ ಮನದ ಹಾಸಿನ ಮೇಲೆ ಹೆಜ್ಜೆ ಮೂಡಿಸಿಕೊಳ್ಳುತ್ತಾ, ಬೇರೆಯಾಗದೇ ಒಲ್ಲದ ಮನಸಿನಿಂದ ಹೆಜ್ಜೆಯಿಟ್ಟು ಕೆನ್ನೆ ತುಂಬ ಸಂಜೆಗೆಂಪು ತುಂಬಿಕೊಂಡು ಒಳದನಿಯ ಮಾತಿಗೆ ಪುಳಕಗೊಳ್ಳುತ್ತಾ ಒಳಸೇರಿ ಮಲಗುತ್ತಾಳೆ.

ಮನುಷ್ಯ ಮಾತ್ರದವನಾದ ಶಿವರಾಯನಂತವಗೇ ಸೇರಿ ಹೋಗುವ ತನ್ನರಸಿ ನಾಗಿಯ ನೆನೆನೆನೆದು ನಾಗೇಂದ್ರನಿಗೆ ಒಳಗೊಳಗೆ ದುಃಖ. ಲೋಕದಂಕೆಯನು ಮೀರಿ ತನ್ನವಳಾಗದ ಕುರಿತು ದುಃಖ, ದುಮ್ಮಾನ, ದುಗುಡದಿಂದ ಹುಟ್ಟಿ ಸೇಡು, ಶಿವರಾಯನ ಹೆಜ್ಜೆಯರಿಸಿ ನಡೆದರೂ ಸಿಗಲಾರದಾಗಿ ಹೊತ್ತು, ಕುದಿವ ಸಿಟ್ಟು ಬಿಸಿಯಾಗಿ, ಉರಿಸೋ ಬೆಂಕಿಯಾಗಿ ದಿನವೆಣಿಸತೊಡಗಿದಾಗ, ನಾಗೇಂದ್ರನ ಮನದಲ್ಲಿ ಹುಟ್ಟಿ ಮೊದಲ ದಿನದಂದಲೇ ಮೂಡಿ ಮರವಾಗಿ, ಬೀಳಲು ಬಿಟ್ಟು ಆಲದ ಮರವಾಗಿದ್ದ. ನಾಗವ್ವನದೇ ನಿತ್ಯ ಕನಸು, ನೋಡಿದಷ್ಟು ನೋಡಬೇಕೆನಿಸಿ, ಮಾತಾಡಿದಷ್ಟೂ ಮಾತಾಡಬೇಕಾಗಿ, ಅವಳಿರದೇ ಬೇರೆಯಾಗಿ ಇರಲಾರೆನೆಂಬ ಭಾವವಾಗಿ, ತನ್ನ ಸನಿಯಲ್ಲಿ ಬೇರಾರಿಗೂ ಪಾಲು ಕೊಡಲಾರೆನೆಂಬುದು ಹಠವಾಗಿ ನಾಗೇಂದ್ರ ಮಲಗಿದಲ್ಲಿಯೇ ಚಡಪಡಿಸತೊಡಗಿದನು ನಾಗರಾಯ.

ಜಾಣೆ ಮುತ್ತವ್ವನಿಗೆಂತದೋ ಕಳವಳ ಮೂಡಿಕೊಂಡ ಹೊತ್ತಲ್ಲಿ, ಜಗಕ್ಕೇ ಬೆಳಕಾದಂತೆ ಮೈ ನೆರೆದು ಮೂರು ದಿಕ್ಕು ಸುದ್ದಿಯಾಗಿ, ಚುಕ್ಕಿ ಚಂದ್ರಮರಿಗೆಲ್ಲ ದನಿಬಂದು ಬೀಸು ಗಾಳಿಯುದೆಯಲ್ಲಿ ಹಾಡು ಮೂಡಿದರೆ ಶಿವರಾಯ ಕುದುರೆಯೇರಿ ಊರೂರಿಗೆ ಸುದ್ದಿ ಸಾರಿ ಬೀಗರನೆಲ್ಲ ಸೇರಿಸಿ ಆರತಿಯುತ್ತಿದರು. ಬರಿಯ ಭೂಮಿಯಾಗಿದ್ದ ನಾಗಿ ಮುಂಗಾರು ಮೈ ತುಂಬಿಕೊಂಡು ಸೃಷ್ಟಿಯ ಸುಗ್ಗಿ ಕಣಕ್ಕೆ ಹದಗೊಂಡಳು. ಹಾಡಾದಳು. ವಿಚಿತ್ರ ಚೆಲುವೆಯನ್ನು ಹೊತ್ತು ನಿಬ್ಬೆರಗಾಗುವ ಹುಬ್ಬಿಗೆ ಕಾರಣವಾದಳು.

ಬೆಳದಿಂಗಳಂತ ಚೆಲುವು ನಾಗಿಯದಾಗಿ ಹುಚ್ಚೆದ್ದು ಹೊಳೆಯಂತ ಹರೆಯ ಶಿವರಾಯನದ್ದಾಗಿ ಮುದುಕಿ ಮುತ್ತಮ್ಮ ತಾಯಿ ಚೆಲುವಮ್ಮ ಕಂದನೊಬ್ಬನನ್ನಡಿ ತುಂಬಿಕೊಳ್ಳುವಾಶೆಯಿಂದ ಮದುವೆ ಹೂಡಿಕೊಂಡಿರಲು ಮತ್ತೆ ಮೇಲೇಳಲಿಲ್ಲ ನಾಗಿ, ಹೊಟ್ಟೆ ನೋವಿನ ನೆವ ಮಾಡಿ ಬಿಚ್ಚದ ಹಾಸಿಗೆ ಸುತ್ತದೇ ಮಲಗಿದಾಕೆ ಮುಳ್ಳ ಬೇಲಿಯ ಮೇಲಿರುವಂತೆ ನರಳಿದಳು. ಒಡಲ ಬಯಕೆ ಬಾಯ್ಬಿಟ್ಟು ಹೇಳಲಾರಳು. ಒಳಗೇ ಕೊರಗಲಾರಳು. ಯಾವ ಜನುಮದ್ದೋ ಶಾಪವೆಂದು ಹಾಸಿಗೆ ತುಂಬ ಹೊರಳುವಳು, ಬೀಸುಗಾಳಿಗೆ ನಿಟ್ಟುಸಿರುಣಿಸುವಳು.

ಮುಂಗುದಿ ಮದುವೆಯೆಂದರೆ ಮುಜುಗುರವಾಗಿ ಬೆದರಿಕೊಂಡಾಳೆ, ಮೈ ಚಳಿ ಬಿಡಲೆಂದು ಚೆಲುವಮ್ಮ ಮಗ ಶಿವರಾಯನನ್ನು ನಾಗಿಯ ಕೋಣೆಗೆ ಕಳಿಸಲು ಶಿವರಾಯ ಕೇಳಿದ.

"ಯಾಕಳುವೆ ನನರಾಣಿ...ಹೊನ್ನ ಕುಸುರಿಯ ಸೀರೆ ತರಲೇನು ಚಿನ್ನದರಳಿನ ದಾವಣಿ ತರಲೇನು.. ಏನು ಬೇಕು ಹೇಳು ನನ್ನೇಳು ಜನುಮ ಜೂಜಿಗಿಟ್ಟು ತರಲೇನು...."
ಮಾತಿಲ್ಲ, ಕಥೆಯಿಲ್ಲ ಶಿವರಾಯನಿಗವಳ ಮೌನವೇ ಮಾರುತ್ತರ.

"ಮಂದುಮ್ಯಾಗಿ ಮುತ್ತು ನಿನ್ನ ಮಲ್ಲಿಗೆ ಹೂವಿನಂಗ ಕಾಯುತೀನಿ ಕಣ್ಣಾಗ ನಿನ್ನಿಟ್ಟು ಕಣ್ಣಿನ ರೆಪ್ಪೆ ನೋಡಿದಾಂಗ ನೋಡ್ಕೊಂತೀನಿ ಹುಲಿ ಹೊನಗಲ್ಲ ನಾನು ಜೀವಕ್ಕೆ ಮತ್ತೆ ಜೀವಕೊಟ್ಟ ಗೀರು ಬೆಳೆದಾಂಗ ಕಾಯುತೇನಿ ಯಾಕಳತಿ"
ಸಂತೈಸಿ ಸೋತ ಶಿವರಾಯ ಮೇಲೆದ್ದು ಚೆಲುವಮ್ಮನ ಕರೆದ.

"ಸೊಸೆಯಲ್ಲ ನಾಗವ್ವ ಈ ಮನೆ ಮಂಗಳೆ. ಕತ್ತಲೂರಿಗೆ ಬೆಳಕು ಬಂದಾಗ ಸೂರ್ಯ ದೇವನಿತ್ತ ಫಲ ನೀನು. ನಿನ್ನ ನೋಯ್ಸಿದರ ಜೀವಕ್ಕೆರವಾದೇವ. ನೋಯಬೇಡವ್ವ ನೀನು ಹಾದಿಗೆಲ್ಲ ಹೂವ ಸುರಿದೇವ ನಾವು" ಮಾತು ನಾಟಲಿಲ್ಲ. ನಾಗಿಯ ಮನಕ್ಕೆ ಮನದಲ್ಲುಳಿದ್ದೊಂದೇ ನಾಗೇಂದ್ರನ ಪ್ರೀತಿ.

ಮದುವೆ ದಿನ ಹತ್ತಿರಾಗಿ ಮರ್ಮಕ್ಕೆ ಪೆಟ್ಟು ಬಿದ್ದಂತಾಗಿ ಕುಳಿತೆಡೆಯಲ್ಲೇ ಹೆಡೆಯರಳಿಸಿ ಬುಸುಗುಟ್ಟಿ ನಾಗೇಂದ್ರ ಸೇಡಿನಲಿ ಮೈಮರೆತ.

"ಸೋಲೆಂಬುದಿಲ್ಲ, ಗೆಲುವೆಂಬುದಿಲ್ಲ ನನ್ನವಳು ನಾಗಿ ಇದ್ದರೆ ನನಗೇ ದಕ್ಕಿ ಶಿವರಾಯ ಶವವಾಗಿ ಹಾದಿಹಳ್ಳದ ಮುಳ್ಳು ದೂರಾಗಲಿ" ಎಂದು ಶಪಥ ಮಾಡಿ ಮಧ್ಯರಾತ್ರಿಯಲ್ಲಿ ಬೆವೆತು ನಿದ್ದೆಗೆಟ್ಟ ಸಮಯದಲಿ ಹಿತ್ತಲ ಬಾಗಿಲೋರೆಯಾಗಿ ಬಂದ ನಾಗವ್ವ ಅರಿಷಿಣ ಹಚ್ಚಿದ ಮೈಮಾಸನೆ ತೋರಿ ಮುತ್ತಷ್ಟು ಕಂಗೆಡಿಸಿದಳು.

"ಸಿಡಿಕ್ಯಾಕೋ ನನದೊರೆಯೇ, ಸುಳಿದ ಸುಳಿಗೆ ನಾವಿಬ್ಬರೂ ಸಿಕ್ಕು ಹೊರ ಬರುವ ದಾರಿ ತೋರೋ. ನಿನ ಬಿಟ್ಟ ಯಾರ ನೆನೆದಿಲ್ಲ. ನಿನ ಬಿಟ್ಟ ಮತ್ತ್ಯಾರ ಮನಸಿಲ್ಲ, ನಿನಗಿಟ್ಟು ಎಡೆಯ ಎಂಜಲಾಗಿಸಬೇಡ" ಬೇಡಿಕೊಡಳು, ಕಾಡಿಕೊಂಡಳು.
ಸಂಕಟದ ಸಿಕ್ಕಿನೊಳಗೆ ಸಿಕ್ಕ ನಾಗೇಂದ್ರ ಮಾತುಕೊಟ್ಟ.

"ಕಾಡುವ ನಿನಗಂಡ ಶಿವರಾಯನ ಕೈಗೆ ಕೊಟ್ಟು ಕುಡುಗೋಲು ಕಳಿಸು ನೀನು ಊರ ಮುಂದಿನ ಕಬ್ಬಿನ ಗದ್ದೆಗೆ, ರಾಮರಸಬಾಳೆ ಕಬ್ಬು ಹೊರೆ ಕಟ್ಟುವಾಗ ಸಾವಾಗಿ ನಾನವಗ ಬಡಿದೇನ. ಶಿವರಾಯನ ಸಾವಲ್ಲಿ. ನಮ್ಮೆದೆಯ ಪ್ರೇಮಂದರಡು ಕಣ್ಣೀರು ಹರಿಸಿ ಬದುಕಿನಸ್ತಮದವರೆಗೆ ನಾವೊಂದಾಗಿ ಬೆರತು ನಮ್ಮ ರೀತಿಗೆ ನಾವೇ ಹೊಸ ಕಾಯ್ದೆ ಬರೆದೇವು"

ಸುಜೆಯಾಯಿತು. ಮತ್ತೆ ಬಂದ ಶಿವರಾಯನೆದುರು ಬಯಕೆ ಬಯಲಿಗಿಟ್ಟಳು "ಬೇಕೆಂವದ್ದು ತರುವ ಶಿವರಾಯ... ತರುವುದಾದರೆ ತಾರೋ ರಾಮ ರಸದಾಳಿ ಕಬ್ಬು. ಮಂದ ತುಂಬಿ ತಿಂದೇನ. ಮನ ತುಂಬಿ ನಿನ್ನ ಮದುವೆಯಾದೇನ"

"ಮುತ್ತು ರತ್ನ ಕೇಳುವಂತ ನಸಗೆಳತಿ ಕಬ್ಬೇನ, ಕಬ್ಬಿನ ತೋಟವ ನಿನಗಂತ ತಂದೇನ" ಎನ್ನುತ್ತಾ ಕತ್ತಲಾದ ಹೊತ್ತಿನಲಿ ಕುಡುಗೋಲೆತ್ತಿ ನಡೆದ ಶಿವರಾಯ. ತೋಟ ಸೇರಿಕೊಂಡಾಗ ನಾಗೇಂದ್ರ ಬೆನ್ನ ಬಿಡದೇ ನಡೆದ. ಕತ್ತಲೋಣಿಯಲಿ ಕುತ್ತಾದ ಗೂಢಗಳು ಕಾಣಲಿಲ್ಲ ಶಿವರಾಮಗೆ. ಕಪ್ಪಿನಲಿ ಹೆಪ್ಪಿಟ್ಟ ಹುನ್ನಾರಗಳೂ ಕಾಣಲಿಲ್ಲ ವಗೆ. ರಾಮ ರಸದಾಳಿ ಕಬ್ಬಿಗೆ ಕುಡುಗೋಲಿಟ್ಟ ಹೊರೆಯಾದ ಕಬ್ಬಿನಲಿ ಒಳಸುಳಿ ಸುತ್ತಿ ಸುಳಿದುಕೊಂಡು ಹೊರೆಯಲ್ಲೊಂದು ಹೊರೆಯಾಗಿ ಅಡಗಿ, ಅರಿಯಲಾರದ ಶಿವರಾಯ ಹೊರೆ ಬಿಗಿದ. ತುದಿಕಟ್ಟೆನಾ, ನಡುವಿನಲಿ ಕಡೆಯಲ್ಲಿ ಮೆಟ್ಟುಗಾಲು ಮೇಲಿಟ್ಟು ಬಿಗಿದ ಬಿಗಿಗೆ ಮಿಸುಕಲಾರದ ನಾಗೇಂದ್ರ ಮಲಗಿದಲ್ಲೇ ಪಿಡುಕಿದ. ಆನೆ ತುತ್ತಿನ ಹೊರೆಯ ಹೆಗಲಿಗಿಟ್ಟು ಹಾಡಿಕೊಳ್ಳುತ್ತಾ ಕತ್ತಲೆಡೆಯ ಮೇಲೆ ಕಾಲಿಡುತ್ತಾ ನಡೆವಾಗ ಗಾಳಿ ಸುಳಿದು ಶಿವರಾಯನ ಕಿವಿಯಲ್ಲಿ ಪಿಸುಗುಟ್ಟಿ ಮೂಕ ಮರಗಿಡಗಳು ಗಳಿಗೆಗೊಂದು ಆಕಾರ ಮೂಡಿಸಿಕೊಂಡು ಅಲಗುತ್ತಾ ಗುಟ್ಟು ಸಾರುವಂತೆ ಹೇಳಿಕೊಂಡದ್ದು ಅರ್ಥವಾಗದೇ ಮನೆಗೆ ಬಂದಾಗ.

ಎದುರ್ಗೊಂಡ ನಾಗಿ ಸತ್ತಿರದ ಶಿವರಾಯ ಬದುಕ್ಯಾಂಗ ಬಂದನೆಂದು ಅರಿಯಲಾರದವಳಾಗಿ ನಿಂತಿರಲು ಪಡಸಾಲೆಯಲಿ ಹೊರೆಯೊಗೆದು ನಿಂತ ಗಂಭೀರ. ಇಡಿ ಕಬ್ಬ ತಿನ್ನಲಾರಳು ಹೂವಂತ ಹುಡುಗಿ, ಕಡಿದು ಕೊಡುವೆನೆನುತಾ, ಕಬ್ಬಿನ ರಾಶಿಗೆ ಕುಡುಗೋಲಿಟ್ಟು ಕಡಿದ. ಬಿದ್ದ ತುಣುಕುಗಳು ಸರ್ಪವೊಂದರ ಚೂರುಗಳು, ಗೇಣಿಗೊಂದು ಮಾರಿಗೊಂದು ಹಾವು ಹೋಳಾಗಿ ಒದ್ದಾಡಿ ಸಾಯುವಾಗ ನಾಗಿಯ ಹೊಟ್ಟೆಯಲ್ಲಿಯ ಜೀವ ಹಿಡಿಯಾಗಿ ಬಾಯಿಗೆ ಬಂದು ಎದೆಯಲ್ಲಿ ಬೆಂಕಿ ಬಿದ್ದು ಒಳಗೋಡಿದಳು.

ಸಾವ ಕೊಡಲು ಹೋಗಿ ತಾನೇ ಸಾವಾದವನ ನೆನೆನೆನೆದು ಮರುಗಿ ಅತ್ತಳು. ಬಾನ ಬಟ್ಟೆಯ ಮ್ಯಾಲಿನ ಚುಕ್ಕಿಗಳಿಗಳವಳ ಕಥೆ ಕೇಳಿ ನಕ್ಕಂತಾಗಿ ಸುತ್ತ ಬಳ್ಳಿಯ ಹೂಗಳ ವಳ ಕುಟಿಲತೆಯ ಕುರಿತು ಕೆಟ್ಟದಾಗಿ ಬಯ್ದಂತಾಗಿ ತಾನೇ ಸೇಡಿನ ಸಿಡಿಲಾದಳು. ಒಡಲೊಳಗಿನ ಬೆಂಕಿ ಹುಗಿದಿಟ್ಟು ಮುಖದ ಮೇಲೆ ಮುಗುಳು ನಗೆಯ ಪರದೆ ಹೊದ್ದು ತನ್ನ ಮಿಂಡನ ಸಾವಿಗೆ ಸಾವ ಬಲಿಕೊಡುವ ಹುನ್ನಾರದಿಂದೆದ್ದು ಎದೆ

ಯುಬ್ಬಿಸಿ ನಿಂತಿದ್ದ ನೋಡಿ ಕಲ್ಲುಗಳೂ ಕೂಡ ತಮಗಿರದ ಆ ಗಡಸುತನಕ್ಕೆ ನಾಚಿಕೊಂಡು ತಮಗಿಂತ ಮಿಗಿಲಾದ ಕತ್ತಲು ತುಂಬಿಕೊಂಡವಳ ಮನದ ಕಪ್ಪು ಕಂಡು ರಾತ್ರಿ ಕಳೆದು ಬೆಳಗಾಯಿತು.

ಓಣಿಕೊನೆಯ ಮನೆಯ ಮುದುಕಿ ಕುಟಲಗಿತ್ತಿ ಕೈಕೇಯಿ ಕರೆದು ಹೇಳಿದಳು. "ನಿನ್ನೆ ರಾತ್ರಿ ಊರಿನಗಸೆ ಬಾಗಿಲಿನಾಚೆ ಚೆಲ್ಲಿದ ಹಾವ ತುಣುಕುಗಳ ತಂದುಕೊಟ್ಟರೆ ನಿನಗೆ ಮೂರು ವರಹ ಕೊಟ್ಟೇನ. ಮತ್ತಾರಿಗೂ ಮಾತೇಳಬೇಡ. ಗುಟ್ಟು ಎದೆಯೊಳಗಿಟ್ಟು ತಾ..."

ಕೈಕೆಯಿ ತಂದು ಕೊಟ್ಟ ಹಾವ ತುಣುಕುಗಳ ಹರಡಿಕೊಂಡು ನೋಡಿದಳು. ಎಂದೋ ಸತ್ತು ಹೋದ ಹಾವಿನ ಹೆಣದೆದುರು ಅತ್ತು ಬಳೆ ತೆಗೆದಳು. ಕುಂಕುಮ ವರೆಸಿಕೊಂಡಳು. ಜೀವ ಬಾರದ ಹೆಣಕೂಡ ಅವಳ ದುಃಖಕ್ಕತ್ತಂತೆ, ಕೊಳೆತ ದೇಹದಿಂದ ಪೊರೆ ಹೊರ ಬಂತು. ಅಳುವಿನ ಮಳೆಯು ಕಳೆದು ಮತ್ತೆ ಹೇಳಿದಳಾಕೆ ಕೈಕೆಯಿಗೆ.

"ಮತ್ತಾರೂ ವರಹ ಕೊಟ್ಟೇನ. ಸೊಗಸುಗಾರ ಸಿಂಪಿಗನ ಬಳಿ ಹೋಗಿ ನನ್ನ ಕುಬಸದ ಬೆನ್ನ ಪರದೆಯ ಮ್ಯಾಲೆ ಈ ಪೊರೆ ಹೊಲಿಸಿಕೊಡು"

ಕುಬಸದ ಬೆನ್ನದಂಚಿಗೆ ಹಾವ ಪೊರೆಯ ಚೂರು ತೊಟ್ಟು ನಿಂತಳು. ಎದುರು ಬಂದ ಶಿವರಾಯನೆದೆ ಬೆಚ್ಚುವಂತೆ ಹೇಳಿದಳು.

"ಬಿಡಿಸಲಾಗದಂತ ಒಗಟು ನನದೈತಿ ಶಿವರಾಯ, ಬಿಡಿಸಿ ಕೊಡು. ಒಡಚಿಕೊಟ್ಟರೆ ನಿನ್ನೊಲವಿಗೊಂದು ಒಡವಿಯಾದೇನ. ನಿನ್ನದೆಯ ಹಾಡಾದೇನ. ಇಲ್ಲಿಂದ ಏಳೇಳು ಜನುಮಕ್ಕೂ ಸತಿಯಾದೇನ. ಬಿಡಿಸಲಾರೆಯಾದರೆ ಕಿಚ್ಚು ಬೆಂಕಿಗೆ ಹಾರಿಕೋ...

ಮೋಡಗಳ ಗುದ್ದಿ ಮಿಂಚು ಸೋಸಿದವ. ಹಿಂಡು ಹುಲಿಗಳ ದಂಡಿಗೊದ್ದು ಓಡಿಸುವಂತ ಶಿವರಾಯ ಒಡಪಿನೆದುರು ಸೋಲೆಬೇಕೇಕೆ ಕೇಳಿದ.

"ಹೇಳು ಮುಗದೆ ಜಗಜಟ್ಟಿ ನಾನು, ಒಡಪೇನು ಮಾಡೀತು"

"ಮೂರು ಕೊಟ್ಟು ತರಿಸೇನ ಮಹರಾಯ, ಆರುಕೊಟ್ಟು ಹೊಲಿಸೇನ" ಒಡಪ ನಿಟ್ಟಳು ಒಡಚಿಕೊಳ್ಳಲು. ದಿನಕಳೆದು ಸಂಜೆಯಾಗಿ ಸಂಜೆದಾಟಿ ರಾತ್ರಿಯಾದರೂ ಕೂಡ ಬಿಡಿಸಲಾಗದ ಒಗಟು ಊರೂರಿಗೆಲ್ಲ ಹಬ್ಬಿ ರಾಜರೋಲುಗಕ್ಕೆ ಮುಟ್ಟಿ ಮುತ್ತಿನೂರಿನಂತ ಊರು ಒಗಟು ಬಿಡಿಸುವವರ ಜಾತ್ರೆಯಾಗಿ ಸುತ್ತೂರಿನ ಸಾವಿರ ಜನವಾದರೂ ಒಗಟಾಗೇ ಉಳಿದ ಒಗಟಿನಿಂದಾಗಿ ಮನೆಯಂಗಳದಲ್ಲಿ ಕಾಡ ಕಟ್ಟಿಗೆಯ ಹೊಂಡ ಮಾಡಿ ಬೆಂಕಿಯಿಟ್ಟರು,

ಮುದುಕಿ ಮುತ್ತವ್ವನಿಗೆ ಮೊಮ್ಮಗಳ ಒಗಟಿನ ಹಿಂದೆ ಒಗಟೇ ತುಂಬಿರುವುದ ಕಂಡು ಸೂರ್ಯ ಪರಮಾತಮನ ನೆನೆದು ಅತ್ತು ಚೆಲುವ ಮೊಮ್ಮಗ ಶಿವರಾಯನನ್ನು ಕಿಚ್ಚಿಗೆ

ತಕ್ಕವುದ ನೋಡಲಾಗದೆ ಸೂರ್ಯ ಪರಮಾತಮನನ್ನೇ ಮತ್ತೆ ಹುಡುಕಿ ಅಡವಿ ಸೇರಿಕೊಂಡು ಕತ್ತಲಿನಲಿ ಆಲದ ಮರದ ಹೊದರಿನಲಿ ಸೇರಿಕೊಂಡಿರಲಾಗಿ.

ಮರದ ನೆತ್ತಿಯ ಮೇಲೆ ಕುಳಿತ ಹಾಲಕ್ಕಿಗಳೆರಡು ಹಾಡಿಕೊಂಡವು: "ಮಿಂಡಗಾರನ ಸಾವಿಗೆ ಮುಂಡೆ ಗಂಡನಾಗುವವನ ಬಲಿ ಕೇಳಿದ್ದ ಕಂಡೆ" ಹಾಲಕ್ಕಿಗಳ ಹಾಡು ಮುದುಕಿ ಮುತ್ತಮ್ಮನ ಚಿತ್ತದಲಿ ಲಕ್ಷೋಪಲಕ್ಷ ದೀವಟಿಗೆ ಮುರಿದಂತಾಗಿ ಚಾಚಿಕೊಂಡ ಕಿವಿಗೆ ಗಂಡು ಹಾಲಕ್ಕಿಯ ಮಾತು ಕೇಳಿತು.

"ಮೂರು ಕೊಟ್ಟು ತಂದದ್ದು ಮಿಂಡೆಗಾರ ನಾಗೇಂದ್ರನ ಪೊರೆ. ಆರು ಕೊಟ್ಟು ಕುಪ್ಪಸ ಹೊಲಿಸಿದ್ದು"

ಹೆಣ್ಣಿನ ಮನಸಿನ ಹೊಲಸಿಗೆ ಹೆಣ್ಣು ಹಕ್ಕಿ ಕೊಕ್ಕಿನಿಂದಲೇ ಉಗುಳಿತು.

"ಸತ್ತು ಹೋದ ಮನಸಿರುವ ಹೆಣ್ಣಿನೊಂದಿಗೆ ಮಲಗಿ ಮಾಡುವುದೇನು ಹಾಸುಗಲ್ಲಿನ ಹಾಸವಳಿಗಿಂತ ಮೇಲು"

ಹೊದರಿನಿಂದೆದ್ದು ಮುದುಕಿ ಊರಿಗೋಡಿದಳು. ಮಧ್ಯ ರಾತ್ರಿ ಮುಚ್ಚಿದ ದಿಡ್ಡಿ ಬಾಗಿಲಿನ ತಳವಾರನಿಗೆರಡು ವರಹ ಲಂಚ ಕೊಟ್ಟು ಬಾಗಿಲ ತೆರೆಸಿ ಒಡಪಿಗುತ್ತರ ಹೊತ್ತು ಬಂದಳು. ಕಿಚ್ಚ ಸೇರಲು ನಿಂತ ಶಿವರಾಯನೆದೆಗೆ ಕೈಯಿಟ್ಟು ತಳ್ಳಿ ಜಗಕೆಲ್ಲ ಸಾರಿದಳು,

"ಬಿಚ್ಚಲಾರದ ಒಗಟೇನಲ್ಲ. ಬಿಡಿಸಲಾರದಾದರದು ಒಗಟಲ್ಲ. ನೆನೆದವರ ನೆನವಲ್ಲಿ ಉಳವಂತ ಒಗಟಿಗೆ ಮಿಂಡಗಾರತಿಯುಳಿದು ಹೋಗವಂತ ಉತ್ತರ"ವೆನ್ನುತ್ತಾ ನಿಂತ ನಾದಿಯ ಬೆನ್ನ ಕುಬಸಕ್ಕೆ ಕೈಯಿಟ್ಟು ಹರಿದು ಹೊಲೆದಿದ್ದ ಪೊರೆಯನೆತ್ತಿ ಹಿಡಿದಳು.

ನಾಗಿಯೆದೆಯಲ್ಲಿ ಕಳವಳ ಮೂಡಿ ಮತ್ತೆ ಮುಖವೆತ್ತಲೇ ನಾಚುಗೆಯಾಗಿ ಸುತ್ತುವರೆದವರ ಬಾಯಿಗಳೆಲ್ಲ ಎಂಜಲುಗಿಯಲು ಕಾಯುತ್ತಿರುವಂತಾಗಿ ಆಡುವವರ ಬಾಯ ಬೆಂಕಿಯು ಬೇಯುವುದಕ್ಕಿಂತ ಎದುರಿದ್ದ ಜ್ವಾಲೆಯೇ ಲೇಸೆನ್ನಿಸಿ ಹಾರಿಕೊಂಡು ಬೂದಿಯಾದಳೆಂಬ ಹೊತ್ತಲ್ಲಿ ಹಾದರದ ಕಥೆಯೆಂಬೋ ಕಥೆ ಮುಗಿದುದು. ●

**ಒಂದು ಟಿಪ್ಪಣಿ**

[ಉತ್ತರ ಕರ್ನಾಟಕದಲ್ಲಿಯ ನಮ್ಮ ಹಳ್ಳಿಗಾಡಿನ ಹೆಂಗಸರು ಹೊಲಿದು ತೊಟ್ಟು ಕೊಳ್ಳುವ 'ಕುಬಸ'ದ ಕುರಿತದ್ದೇ ಕಥೆ ಇದು. ಆ ಕುಬಸಗಳ ಹಿಂಬದಿಯು ಹೊಲಿಗೆ ಹೊರಮುಖವಾಗಿದ್ದು ತೆರೆದುಕೊಂಡಿರುತ್ತದೆ. ಹೀಗೆ ಒಳಗೆ ಮುಚ್ಚಿಕೊಳ್ಳ ಬೇಕಾದ ಬೆನ್ನ ಮೇಲಿನ ಹೊಲಿಗೆ ತೆರೆದಂತೆ ಕಾಣುವ ಬಗ್ಗೆ ಕೇಳಿದರೆ ಕುಪ್ಪಸದಲ್ಲಿ 'ಏನೂ ಇಟ್ಟು' ಹೊಲೆದಿಲ್ಲ ಎಂಬುದು ಗಂಡನಿಗೆ ಸ್ಪಷ್ಟ ಪಡಿಸುವ ಸಂಕೇತವಂತೆ. 'ಆಗಡಿ'ಯಲ್ಲಿ ನನ್ನ ಅಜ್ಜಿ ನನಗ ಹೇಳಿದ ಕಥೆಯಿದು. ಅವಳು ಅವಳ ಮುತ್ತಜ್ಜಿ ಯಿಂದ ಕೇಳಿದ ಕಥೆ. ಹಳ್ಳಿಯಲ್ಲಿ ಹೆಣ್ಣುಮಕ್ಕಳು ತಮ್ಮ ಗುಂಪಿನೊಳಗೆಯೇ ಗೌಪ್ಯವಾಗಿ ಹೇಳಿಕೊಳ್ಳುವ ಈ ಕಥೆಯು ಮೂಲ ರೂಪ ತಿರುಚದೆಯೇ ಸಾಧ್ಯ ವಿದ್ದಷ್ಟು ಜಾನಪದದ ಸೊಗಡಿನಲ್ಲಿಯೇ ಹಿಡಿದಿರುವ ಪ್ರಯತ್ನ ಮಾಡಿದ್ದೇನೆ.

ಲೇಖಕ.]

---

## ಪ್ರಿಯ ಚಂದಾದಾರರೇ

ಡಿಸೆಂಬರ ೧೯೯೩ರ ಈ ಸಂಚಿಕೆಯೊಂದಿಗೆ ನಿಮ್ಮಲ್ಲಿ ಬಹುತೇಕ ಗೆಳೆಯರ ಚಂದಾ ಅವಧಿ ಮುಗಿಯುತ್ತದೆ. ದಯಮಾಡಿ ಜನವರಿ ೧೫, ೧೯೯೪ ರೊಳಗಾಗಿ ಹೊಸ ಚಂದಾ ಕಳಿಸಬೇಕೆಂದು ವಿನಂತಿ.

ಸಂಕ್ರಮಣ ಬಳಗದ ನಿಮ್ಮಲ್ಲಿ ಒಂದು ಆಗ್ರಹದ ಕೋರಿಕೆ. ನಿಮ್ಮ ವಲಯದಲ್ಲಿ ನಾಲ್ಕರು ಸ್ನೇಹಿತರನ್ನಾದರೂ ಚಂದಾದಾರರನ್ನಾಗಿ ಮಾಡಿರಿ. ನೀವು ಹೆಸರು ವಿಳಾಸ ಕೊಟ್ಟರೆ ನಾವೂ ಅವರನ್ನು ಸಂಪರ್ಕಿಸುತ್ತೇವೆ. ಎಂ. ಓ. / ಡಿ. ಡಿ. ಮೂಲಕ ಮಾತ್ರ ಹಣ ಕಳಿಸಿರಿ.

**ಸಂಪಾದಕ**

---

# ಪ್ರಯಾಣ ಕಾಲ, ಸಖಿ

ಆರ್ ನಿರ್ಮಲ

ಅರ್ಧ ಶತಮಾನದ ಹಿಂದೆ ನಮ್ಮ ಸೋದರ ಮಾವನವರ ಮದುವೆ. ಮುವ್ವತ್ತು ಕಿಲೋಮೀಟರ್ ದೂರದಲ್ಲಿ ಹೆಣ್ಣಿನವರ ಮನೆ. ಎರಡು ಊರುಗಳ ನಡುವೆ ಆಗಲೇ ರೈಲು ಓಡುತ್ತಿತ್ತು. ಮದುವೆ ದಿಬ್ಬಣ ಮಾತ್ರ ರೈಲನ್ನು ನಂಬಲಿಲ್ಲ. 'ನಮ್ಮೆತ್ತು ನಮ್ಮ ಗಾಡಿ, ನಡೀರಪ್ಪ ಗಾಡಿ ಕಟ್ಟಿಸೋಣ' ಎನ್ನುತ್ತ ಜೋಡೆತ್ತಿನ ಕಮಾನು ಗಾಡಿಗಳಲ್ಲಿ ಗಂಡಿನವರು ರಾತ್ರಿ ಹಗಲು ಪ್ರಯಾಣಿಸಿದರು. 'ಜೀವನದಾಗೆ ಆಗೋದೊಂದು ಸಲ ಮದುವೆ. ಹೊತ್ತಿಗೆ ಸರಿಯಾಗಿ ಹೋಗದಿದ್ದರೆ ಹೇಗೆ' ಎಂಬುದು ಅವರ ಆಲೋಚನೆ. ಅಂದು ರೈಲನ್ನು ನಂಬದೇ ಹೋದ ಆತ್ಮೀಯರ ನಡುವೆ ಸಿಂಗರಿಸಿದ ಗಾಡಿಯಲ್ಲಿ ಮದುವೆ ಗಂಡು ಸುಂದರ ಕನಸುಗಳನ್ನು ಹೆಣೆದಿರಬಹುದು. ಆ ಕನಸುಗಳಲ್ಲಿ ಇಂದಿನ ವೇಗದ ಪ್ರಪಂಚದ ಅವಸರದ ಪ್ರಯಾಣಗಳ ಕಿಂಚಿತ್ ಕಲ್ಪನೆಗೂ ಅವಕಾಶವಿದ್ದಿರಲಿಕ್ಕಿಲ್ಲ.

ಪ್ರಪಂಚದ ಮಾತು ಬಿಡಿ. ಈಗ ಭಾರತದಲ್ಲೇ ಎಂಥೆಂಥ ರೈಲುಗಳು ಬಂದಿವೆ, ರೈಲಿಲ್ಲದ ಜನಬದುಕನ್ನು ಇಂದಿನ ಪೀಳಿಗೆ ಕಲ್ಪಿಸಿಕೊಳ್ಳಲಾರದು. ಇಂದು ಊರುಗಳ ನಡುವಿನ ದೂರ ಕಡಿಮೆಯಾಗಿದೆ. ಹೆಣ್ಣು-ಗಂಡೆನ್ನದೆ ಸಹಸ್ರಾರು ಜನ ದಿನನಿತ್ಯ ನೂರಾರು ಮೈಲಿ ಪ್ರಯಾಣಿಸುತ್ತಿದ್ದಾರೆ. ಲಕ್ಷಾಂತರ ಜನ ರೈಲನ್ನು ನಂಬಿ ಜೀವನ ಸಾಗಿಸುತ್ತಿದ್ದಾರೆ. ಕಲ್ಲಿದ್ದಲಿನಿಂದ ಓಡಲು ಮೊದಲಿಟ್ಟ ರೈಲು ಈಗ ಡೀಸಲ್, ವಿದ್ಯುತ್ ನೆರವಿನಿಂದ ಹಕ್ಕಿಯ ವೇಗದಲ್ಲಿ ಹಾರಾಡುತ್ತಿವೆ. ನಮ್ಮ ರೈಲುಗಳು ಸಮಾನಾಂತರ ಕಂಬಿಗಳ ಮೇಲೆ ಓಡಿದರೆ ಒಂಟಿ ಕಂಬಿಗಳ ಕೆಳಗೆ ಜೋತಾಡುತ್ತ

ಸಾಗುವ ರೈಲುಗಳೂ ಸಿದ್ಧವಾಗಿವೆ. ಇನ್ನೇನು ಕಂಬಿ ಇಲ್ಲದೆಯೂ ರೈಲು ಬಿಡಬಹುದು. ಎಳೆತನದಲ್ಲಿ, ಕಂಬಿಯಿಲ್ಲದ ರೈಲುಗಳಲ್ಲಿ ಕುಳಿತು ಚಲಿಸುತ್ತ ನನಗೆ ನಾನೇ ಕಳೆದು ಹೋಗುತ್ತಿದ್ದ ಕನಸುಗಳು ನನ್ನನ್ನು ಪದೇ ಪದೇ ಕಾಡುತ್ತಿತ್ತು.

ಸುಮಾರು ನೂರೈವತ್ತು ವರ್ಷಗಳ ಹಿಂದೆ ಜುಕ್ ಭುಕ್ ಜುಕ್ ಎಂದು ಇಂಗ್ಲೆಂಡಿನಲ್ಲಿ ಸಂಚಾರ ಹೊರಟ ರೈಲುಗಳಲ್ಲೀಗ ಎಷ್ಟೊಂದು ಬಗೆ! ಮೇಯಿಲ್, ಗೂಡ್ಸ್, ಪ್ಯಾಸೆಂಜರ್, ಎಕ್ಸ್‌ಪ್ರೆಸ್, ನಾನ್‌ಸ್ಟಾಪ್, ನ್ಯಾರೋಗೇಜ್, ಮೀಟರ್‌ಗೇಜ್, ಬ್ರಾಡ್‌ಗೇಜ್ ಎನ್ನುತ್ತ ಅನೇಕ ತಾಂತ್ರಿಕ ಸಾಧನೆ ಸಿದ್ಧಿಗಳನ್ನು ಪಡೆದಿದೆ. ಬೆಟ್ಟದಲ್ಲಿ ಸುರಂಗ ಕೊರೆದು, ಹರಿವ ನದಿಗಳಿಗೆ ಸೇತುವೆ ಕಟ್ಟಿ, ಸಾಗರದಡಿಯಲ್ಲೂ ಹಳಿ ಹಾಕಿ ರೈಲು ಓಡುತ್ತಿದೆ. ಹಗಲು ರಾತ್ರಿಗಳಲ್ಲಿ ಒಂದೇ ಸಮ ಓಡುತ್ತಿದೆ. ನಾವು ಚಿಕ್ಕಂದು ಪ್ರಯಾಣಿಸುವಾಗ ಉದ್ದುದ್ದನೆಯ ಮೂರು ಸೀಟುಗಳು ಬೋಗಿ ತುಂಬ ಚಾಚಿಕೊಂಡಿರುವ ಹಲವು ರೈಲುಗಳಿದ್ದವು. ಆಸನ ವ್ಯವಸ್ಥೆಯೂ ಕಾಲದಿಂದ ಕಾಲಕ್ಕೆ ಬದಲುಗೊಳ್ಳುತ್ತ ಸಾಗಿದೆ. ಜೀವನವೆಂದರೆ ಹೀಗೆ. ಬದಲಾವಣೆ, ನಿತ್ಯ ಬದಲಾವಣೆ, ನಿರಂತರ ಬದಲಾವಣೆ.

ನಾವು ಚಿಕ್ಕ ಹುಡುಗರಾಗಿದ್ದಾಗ ರಜೆಗೆ ಮದುವೆಗೆ ಪ್ರಯಾಣ ಹೊರಡುವುದಿದ್ದರೆ ರೈಲಿನಲ್ಲೇ ಪ್ರಯಾಣ ಎಂದು ರಚ್ಚೆ ಹಿಡಿಯುತ್ತಿದ್ದುದುಂಟು. ಅರ್ಧದಾರಿ ಬಸ್ಸು ಅರ್ಧದಾರಿ ರೈಲು ಎರಡೆರಡು ಕಡೆ ಕಾಯುತ್ತ ನಿಲ್ಲುವುದು ಬೇಸರವಾದರೂ ಹಿರಿಯರು ಕೆಲವೊಮ್ಮೆ ನಮ್ಮ ಹಠಕ್ಕೆ ಮಣಿಯುತ್ತ ಇದ್ದುದುಂಟು. ಆಗ ನಮ್ಮ ಆನಂದಕ್ಕೆ ಪಾರವೇ ಇಲ್ಲ. ರೈಲು ಅದೆಷ್ಟು ಸಂಭ್ರಮ ತಂದಿತ್ತೆಂದರೆ ರೈಲು–ರೈಲಿನ ಇಂಜಿನ್ ನೋಡಲೆಂದೇ ನಾಲ್ಕಾರು ಕಿಲೋಮೀಟರ್ ನಡೆದು, ಕ್ಲಾಸಿಗೆ ಚಕ್ಕರ್ ಕೊಟ್ಟು ಹೊಡೆತ ತಿನ್ನುತ್ತ ಇದ್ದವರೂ ಉಂಟು. ನೂರಾರು ಊರು ತಿರುಗಿ ಬರುವ ಇಂಜಿನ್ ನೋಡಲು ಹೋಗುವ ಖುಷಿಗೆ ಹೊಡೆತ ಏನು ಮಹಾ? ಮೇಣಸಿನಕಾಯಿ ಘಾಟು ಹಾಕಿದರೂ ಪರವಾಗಿಲ್ಲ; ಮರುದಿನ ಮತ್ತೆ ರೈಲು ನೋಡಲು ಹೋಗುವುದು. ರೈಲ್ವೇ ಡ್ರೈವರ್ ಆಗಬೇಕೆಂಬುದೇ ಆಗಿನ ಎಷ್ಟೋ ಹುಡುಗರ ಜೀವನದ ಕನಸಾಗಿತ್ತು. ಸಮಾನಾಂತರ ಹಳಿಗಳ ಮೇಲೆ ಕೈಕೈ ಹಿಡಿದು ನಡೆಯುತ್ತ ಪರ್ಯಟನ ಮಾಡಿದಷ್ಟು ಸಂತೋಷಿಸುತ್ತಿದುದುಂಟು. ಅಷ್ಟೇ ಅಲ್ಲ ರೈಲಿಗೆ ಎರಡಾಣೆ ಕೊಡಲಾರದ ಬಡತನಕ್ಕೆ ರೈಲು ಹಳಿಗಳ ಅಂಚಿಗೇ ನಡೆದು ತಮ್ಮ ತಮ್ಮ ಊರು ಸೇರುತ್ತಿದ್ದ ವಿದ್ಯಾರ್ಥಿಗಳಿದ್ದರು. ನಮ್ಮ ಬಾಲ್ಯದ ದಿನದ ಕನಸು-ಖುಷಿಗಳಲ್ಲಿ ರೈಲು ಪ್ರಯಾಣಕ್ಕೆ ಮಹತ್ವದ ಪಾತ್ರವಿತ್ತು.

ಬಸ್ಸು, ಹಡಗು ವಿಮಾನಗಳ ಪ್ರಯಾಣಕ್ಕೆ ಈ ಸಂಭ್ರಮವಿಲ್ಲ. ಬಸ್ಸಿನೊಳಗೆ ಕೇವಲ-ನಲವತ್ತು ಐವತ್ತು ಜನರ ಸೀಮಿತ ಪ್ರಪಂಚ. ಕಿಟಕಿಯಾಚೆ ಕಣ್ಣು ಹಾಯಿಸಿದರೂ ಹಿಂದೋಡುವ ಮರಗಿಡ ಊರು ಕಾಣಬಹುದಾದರೂ ಬಸ್ಸಿನ ಜಾಗ ಕಿರಿದು; ಮನಸ್ಸಿಗೆ ಕಿರಿಕಿರಿ. ನಾವು ಎಚ್ಚರ ತಪ್ಪಿ ಕೂತಿದ್ದರೆ ನಿಂತಿದ್ದರೆ ಆಗಲೇ ಡ್ರೈವರ್ ಬ್ರೇಕೊತ್ತಿ ಮುಂದಕ್ಕೊ ಹಿಂದಕ್ಕೊ ಜೋಲಿ ಬೀಳುವುದು. ತಲೆಗೆ ಕಂಬಿ ಬಂದು ಬಡಿಯುವುದು. ಬಸ್ಸು ಕಿಕ್ಕಿರಿದು ಬಿಟ್ಟರಂತೂ ಕೂತ ಜಾಗಕ್ಕೊ ನಿಂತ ಜಾಗಕ್ಕೊ ಅಂಟಿಕೊಂಡು ಉಸಿರಾಡುವುದಕ್ಕೂ ಪರದಾಡುವುದು. ಹಡುಗುಗಳಲ್ಲಿ ಸಮುದ್ರ ಪ್ರಯಾಣ ಹೊರಟರೆ ಮೇಲೂ ನೀಲಿ, ಸುತ್ತ ನೀಲಿ ಪ್ರಯಾಣ ಕಾಲ ಪೂರ್ತಿ ನೆಲದ ಸಂಪರ್ಕವೇ ಇಲ್ಲದೆ ಭಣಗಾಡುವ ಸ್ಥಿತಿ. ವಿಮಾನ ನೆಲಬಿಟ್ಟು ಹಾರುವಾಗಿನ ಜೀಕು ಬಿಟ್ಟರೆ ಸುಮ್ಮನೆ ಹವಾನಿಯಂತ್ರಿತ ಕೋಣೆಯೊಳಗೆ ನಿಷ್ಕ್ರಿಯರಾಗಿ ಕೂತಂತ ಅನುಭವ. ಎದುರಿಗೆ ನೋಡುತ್ತೀರಾ. ಬರೀ ಆಕಾಶ ನೀಲಿ. ಅಥವಾ ಕೆಳಗೆ ಮೋಡ. ಅಥವಾ ಗುರುತಿಸಲಾಗದಷ್ಟು ಚಿಕ್ಕದಾಗಿ ಬೆಟ್ಟ ಗುಡ್ಡ ಊರುಗಳ ಚಿತ್ತಾರ. ಅದಕ್ಕೆ ರೈಲು ಪ್ರಯಾಣದಲ್ಲಿ ಸಿಕ್ಕುವ ಸೌಲಭ್ಯ ಖುಷಿಗಳು ಇನ್ನಾವ ರೀತಿಯ ಪ್ರಯಾಣದಲ್ಲೂ ದಕ್ಕುವುದಿಲ್ಲ.

ಬಸ್ಸಿನಲ್ಲಿ ಮುಂದೆ ಕೂತವರ ತಲೆ ಬೆನ್ನು ಕೂದಲು ಎಷ್ಟು ಹೊತ್ತೆಂದು ನೋಡುವುದು? ರೈಲಿನಲ್ಲಾದರೆ ನೂರು ಬಗೆಯ ಚಟುವಟಿಕೆ. ಪುಟ್ಟದೊಂದು ಪ್ರಪಂಚವೇ ಅಲ್ಲಿ ಅಡಗಿರುತ್ತದೆ. ವಿವಿಧ ವಯಸ್ಸಿನ ವಿವಿಧ ಸ್ವಭಾವಗಳ ಜನಗಳ ರೀತಿನೀತಿಯನ್ನು ಗಮನಿಸುತ್ತ ಕೂಡುವುದೇ ಒಂದು ಸ್ವಾರಸ್ಯ. ಒಂದು ಮಾತು. ಗಾಂಧೀ ಕ್ಲಾಸಿನಲ್ಲಿ ಸಿಗುವಷ್ಟು ದೃಶ್ಯ ವೈಭವ ಕಾದಿರಿಸಿದ ಬೋಗಿಗಳಲ್ಲಾಗಲೀ ಫಸ್ಟ್ ಕ್ಲಾಸ್ ಬೋಗಿಯಲ್ಲಾಗಲೀ ಕಾಣಸಿಗುವುದಿಲ್ಲ. ಏನೆನ್ನುತ್ತೀರೋ ಪಿಳಿಪಿಳಿ ಕಣ್ಣು ಬಿಡುವ ಕಲ್ಲು ವಿಗ್ರಹದಂತೆ ಜನ ತಮ್ಮ ಸುಖಾಸನಗಳಲ್ಲಿರುತ್ತಾರೆ. ಮಾತಿಲ್ಲ; ಕಥೆಯಿಲ್ಲ. ಬಾಯಿ ಬಿಡುವುದು ಅವರ ಶ್ರೀಮಂತ ಪ್ರತಿಷ್ಠೆಗೆ ಕುಂದು ಎಂಬಂತಿರುತ್ತಾರೆ.

ರೈಲಿನಲ್ಲಾದರೆ ಹೊಟ್ಟೆ ಕೆಟ್ಟರೂ ಚಿಂತೆಯಿಲ್ಲ. ಅದಕ್ಕೆಲ್ಲ ವ್ಯವಸ್ಥೆ ಉಂಟು. ಬಸ್ಸಿನಲ್ಲಾದರೆ ಅದೆಷ್ಟು ಪರದಾಡಬೇಕು. ಹೊಟ್ಟೆ ಕೆಟ್ಟು ಹೇಗೋ ಬಸ್ ನಿಲ್ಲಿಸಿ, ಇಳಿದು ಬಸ್ ತಪ್ಪಿಸಿಕೊಂಡವರೆಷ್ಟು ಜನ. ರೈಲಿನಲ್ಲಾದರೆ ಕಾಲು ಚಾಚಬಹುದು; ಜಾಗವಿದ್ದರೆ ಮಲಗಬಹುದು; ಜಾಗವಿಲ್ಲದಿದ್ದರೂ ಮೇಲಿನ ಬರ್ತ್ ಹತ್ತಿ ಆರಾಮ ಪಡೆಯಬಹುದು, ಉಯ್ಯಾಲೆಯ ಜೀಕನ್ನು, ಜೋಗುಳದ ಸವಿಯನ್ನು ಪಡೆಯಬಹುದು. ಕೂತು ಸಾಕಾದರೆ ಇಂಜಿನ್ ತುದಿಯಿಂದ ಗಾರ್ಡ್ ಡಬ್ಬಿಯವರೆಗೆ ರೈಲುದ್ದಕ್ಕೂ ನಡೆಯಬಹುದು.

ಪ್ರಯಾಣಿಕರು ಕಿಕ್ಕಿರಿದ ನಿಲ್ದಾಣದಲ್ಲಿ ಹಲವೆಡೆ ಜನ ಕಿಟಕಿಯಿಂದಲೇ ಹತ್ತುವ ಸಾಹಸವನ್ನು ಆಸ್ವಾದಿಸಬಹುದು. ಕೇಳಿದ ಎಲ್ಲರಿಗೂ ಟಿಕೆಟ್ ಕೊಟ್ಟು ರೈಲು ಹತ್ತಿ-ಸಂತ್ತಾರಲ್ಲ. ಆದ್ದರಿಂದ ದೊಡ್ಡ ಕಿಟಕಿಗಳ ಸದುಪಯೋಗವನ್ನು ಜನ ಹೀಗೆ ಮಾಡಿಕೊಳ್ಳುತ್ತಾರೆ. ಕೆಲವು ಕಡೆ ರೈಲು ಹತ್ತಿಳಿವ ಪ್ರಯತ್ನವನ್ನೂ ಮಾಡಬೇಕಾಗಿಲ್ಲ. ನಿಲ್ದಾಣದಲ್ಲಿ ನಿಂತಿದ್ದರೆ ಸಾಕು. ಜನಸಾಗರವೇ ನಿಮ್ಮನ್ನು ರೈಲುನೊಳಕ್ಕೆ ಹಾಕಿರುತ್ತದೆ. ರೈಲೂ ಸಹ ವಿಶಾಲ ಮನಸ್ಸಿನಿಂದ ಒಳಕ್ಕೆ ಸೆಳೆದುಕೊಳ್ಳುತ್ತದೆ.

ರೈಲು ಪ್ರಯಾಣ ಬಗ್ಗೆ ಇಷ್ಟೆಲ್ಲ ಯಾಕೆ ಹೇಳಕ್ಕೆ ಬಂದೆ ಅಂದ್ರೆ ಸ್ವಲ್ಪಕಾಲ ವಾಸದ ಸ್ಥಳಕ್ಕೂ ಉದ್ಯೋಗ ಸ್ಥಳಕ್ಕೂ ರೈಲಿನಲ್ಲಿ ದಿನನಿತ್ಯ ಲಾಳಿಯಾಡುತ್ತ ಇದ್ದಾಗಿನ ಕೆಲವು ಅನುಭವಗಳನ್ನು ನಿಮ್ಮೊಂದಿಗೆ ಹಂಚಿಕೊಳ್ಳುವುದಕ್ಕೆ. ಮೊದಲೇ ನಾವು ಗೃಹಿಣಿಯರು, ಸಂಸಾರದಲ್ಲೊಂದು ಕಾಲು ಉದ್ಯೋಗದಲ್ಲೊಂದು ಕಾಲು ಇಟ್ಟು ಸರ್ಕಸ್ ಮಾಡುತ್ತಿರುತ್ತೇವೆ. ಇನ್ನು ನಿತ್ಯಸಂಚಾರದ ಬವಣೆಯೂ ಸೇರಿದರೆ ನಮ್ಮ ಸ್ಥಿತಿಯನ್ನು ಸ್ವಲ್ಪ ಊಹಿಸಿಕೊಳ್ಳಿ. ಇದ್ದ ಊರಿನ ಸೂರ್ಯೋದಯ ಸೂರ್ಯಾಸ್ತಮಾನವನ್ನು ಕಾಣದೆ ದಿನದ ಆರೆಂಟು ಗಂಟೆಗಳನ್ನು ನಿಲ್ದಾಣದಲ್ಲಿ ಹಾಗೂ ಪ್ರಯಾಣದಲ್ಲಿ, ಅಂತರಪಿಶಾಚಿಗಳಂತೆ ಕಳೆಯುತ್ತ ಬರೀ ನಿದ್ರೆ ಅಡಿಗೆ ಸ್ನಾನಕ್ಕಾಗಿ ಮನೆಯೆಂಬ ಗೂಡನ್ನು ನಂಬಿರುತ್ತಿದ್ದೆವು. ಎಷ್ಟೋ ಸಲ ಮನೆ ತಲುಪುವುದು ತಡವಾಗಿ ಗಂಡ ಮಕ್ಕಳು ನಿದ್ರೆಗಣ್ಣಿನಲ್ಲಿದ್ದು. ಮತ್ತೆ ನಸುಕಿನಲ್ಲಿ ನಾವು ಮನೆ ಬಿಟ್ಟರೆ, ಮನೆಯವರೊಡನೆ ಮಾತಾಡಿ ಹಲವು ದಿನಗಳೇ ಆದನಿಸುವತ್ತದೆ. ಈ ಬೇಗೆಯನ್ನು ಮರೆಸುತ್ತಿದ್ದುದು ರೈಲಿನ ಪ್ರಪಂಚ.

ಕಾಣುವ ದೃಶ್ಯಗಳಿಗೆ ಕಾವ್ಯದ ಚೌಕಟ್ಟು ಕಟ್ಟುವ ಕಿಟಕಿ ಬದಿ ಸೀಟು ಸಿಕ್ಕರೆ, ಆಕಾಶ ನೀಲಿ, ಮುಗಿಲು, ನೆಲ ಹಸಿರು ನದಿ ಸೇತುವೆಗಳ ವೈಭವವನ್ನು ಸವಿಯುತ್ತ ಇರಬಹುದು, ಏನಿಲ್ಲದಿದ್ದರೂ ಹಿಂದೋಡುವ ಮರಗಿಡಗಳಾದರೂ ಕಣ್ಸೆಳೆಯುತ್ತವೆ. ಕಿಟಕಿಯೆಂದರೇ ಸೊಗಸು. ಆದರೆ ಅದು ಎಲ್ಲ ಸಮಯದಲ್ಲಿ ಎಲ್ಲರಿಗೂ ಸಿಗಲು ಸಾಧ್ಯವಿಲ್ಲ. ಬದುಕಿನ ಒತ್ತಡಕ್ಕೊಂದು ಹೊರಚಾಲನೆ ಕೊಡುವ ಕಿಟಕಿ ಪಕ್ಕ ಸಿಗದಿದ್ದರೂ, ರೈಲಿನೊಳಗೆ ಕಾಣುವ ಪ್ರಪಂಚ-ಜನ. ಬದುಕು ಕೊಡುವ ಅನುಭವ ಕಡಿಮೆಯದೇನಲ್ಲ. ಕಾಣುವ ಕಣ್ಣು ಸವಿಯುವ ಮನಸ್ಸು ಬೆಳೆಸಿಕೊಳ್ಳಬೇಕು ಅಷ್ಟೆ.

ಎಷ್ಟೋ ವರ್ಷಗಳಿಂದ ದಿನಾ ಓಡಾಡಿ ಸಾಕಾಗಿದೆ, ಎಷ್ಟು ಪ್ರಯತ್ನ ಪಟ್ಟರೂ ಇದ್ದೂರಿಗೆ ವರ್ಗ ಸಿಗುತ್ತಿಲ್ಲ ಎಂದು ಹಲುಬುವವರು ಬೇಕಾದಷ್ಟಿರುತ್ತಾರೆ. ಅನಿವಾರ್ಯವಾದದ್ದನ್ನು ಒಪ್ಪಿಕೊಳ್ಳುವ ಸಹನಶೀಲರು ಕೆಲವರಾದರೆ ಪ್ರಯಾಣಕಾಲಕ್ಕೆ

ಒಗ್ಗಿ ಹೋದವರು ಕೆಲವರು, ರೈಲಿನಿಂದಲೇ ಸೂರ್ಯೋದಯ ಸೂರ್ಯಾಸ್ತಗಳನ್ನು ಸವಿದು ಸಂಭ್ರಮಿಸುತ್ತಿದ್ದವರು ಮತ್ತಷ್ಟು ಮಂದಿ. ತಾವು ಪ್ರಯಾಣಿಸುವ ರೈಲುಗಳ ಹಾದಿಯಲ್ಲಿ ಸಿಕ್ಕುವ ಊರುಗಳೆಲ್ಲದರ ಜಾತಕದ ವಿವರಗಳನ್ನು ತಿಳಿದುಕೊಂಡ ಸರ್ವಜ್ಞರಿದ್ದರು. ಸಿಸಿಕರೂ ಸಿಡುಕರೂ ಇರುವಂತೆ ತಮ್ಮೆಲ್ಲ ಕಷ್ಟ ನುಂಗಿ ನಗುವ ನಗಿಸುವ ಲವಲವಿಕೆಯ ಸಹಪ್ರಯಾಣಿಕರಿದ್ದರು.

ಜೀವಂತ ನಡೆಯುವ ವಾರ್ತಾ ಸಂಚಿಕೆಗಳು ನಿಮಗೆ ಬೇಕಿದ್ದರೆ ನೀವು ರೈಲುಗಳಲ್ಲಿ ಸಂಚರಿಸಬೇಕು. ಯಾವಾಗ ಯಾವ ಜಿ. ಓ. ಆಯಿತು ಎಂಬ ವಿಚಾರದಿಂದ ಹಿಡಿದು ಯಾರು ಯಾವ ದಿನ ಯಾಕೆ ಸಿ. ಎಲ್. ಹಾಕಿದರು ಎಂಬಂತ ಖಾಸಗಿ ವಿಚಾರದ ವಿವರಗಳನ್ನೆಲ್ಲ ಒದಗಿಸಬಲ್ಲ ಉತ್ಸಾಹಶೀಲರಿದ್ದರು. ತಮ್ಮ ಅನುಕೂಲಕ್ಕೆ ತಕ್ಕಂತೆ ರೈಲುವೇಳಾ ಪಟ್ಟಿಯನ್ನು ಬದಲಾಯಿಸಲು ಒತ್ತಾಯಿಸುವ ಪ್ರಯಾಣಿಕರ ಸಂಘ ಸಂಸ್ಥೆಗಳಿದ್ದವು. ಭಕ್ತಮಂಡಲಿಗಳೂ ಭಜನಾಮಂಡಲಿಗಳೂ ಭಕ್ತಿಪ್ರಸಾರದಲ್ಲಿ ತೊಡಗಿದ್ದವು. ಒಟ್ಟಾರೆ ಬಡವರ ಮಧ್ಯಮ ವರ್ಗದವರ ಬದುಕಿನೊಡನೆ ಬೆಸೆದು ಕೊಂಡದ್ದು, ಈ ರೈಲಿನೋಟ.

ಕಡಲೇಕಾಯಿ ಸಪೋಟ ಸೀಬೇಕಾಯಿ ಮಾರುವವರಿದ್ದರು. ಅವುಗಳ ಗಿರಾಕಿಗಳಿದ್ದರು. ಸೀರೆ ಬಟ್ಟೆ ವ್ಯಾಪಾರವೂ ನಡೆಯುತ್ತಿತ್ತು. ವ್ಯಾಪಾರವೆಂದಲ್ಲ ತಾವುಟ್ಟಿದ್ದನ್ನು ನೋಡಿ ಆಸೆಪಟ್ಟವರಿಗೆ ಅಂಗಡಿಗಳಿಂದ ತಂದು ಕೊಡುವ ಉಪಕಾರ ಪ್ರಿಯರಿದ್ದರು. ಪರೀಕ್ಷೆಯ ತಯಾರಿಗೆಂದು ಪುಸ್ತಕಗಳ ಮೇಲೆ ಕಣ್ಣು ಹಾಯಿಸುವ ವಿದ್ಯಾರ್ಥಿಗಳಿದ್ದರು. ಪರೀಕ್ಷಾ ಪತ್ರಿಕೆಗಳನ್ನು ತಿದ್ದುವ ಕಾರ್ಯನಿರತ ಅಧ್ಯಾಪಕರೂ ಇರುತ್ತಿದ್ದರು. ಬೇಸಿಗೆ ಶಿಬಿರಗಳು ನಡೆಯುವುದಿಲ್ಲವೆ? ಹಾಗೆ ಅಲ್ಲಲ್ಲಿ ಹೆಣಿಗೆ, ಹೊಲಿಗೆ ಪ್ಲಾಸ್ಟಿಕ್ ಚೀಲ ಹಾಕುವ ವಿವಿಧ ಸಾಮಗ್ರಿಗಳಿಂದ ಕುಶಲವಸ್ತುಗಳನ್ನು ನಿರ್ಮಿಸುವ ತರಗತಿಗಳು ನಡೆಯುತ್ತಿದ್ದವು. ಹೆಣಿಗೆ ಕಲಿಯಲು ಮೊದಲಿಟ್ಟು ಪ್ರಾವೀಣ್ಯತೆ ಪಡೆದು ಪ್ರತಿ ಚಳಿಗಾಲಕ್ಕೊಂದರಂತೆ ಬಗೆಬಗೆಯ ಸ್ವೆಟರ್ ಶಾಲುಗಳನ್ನು ಗಂಡ, ಮಕ್ಕಳಿಗೆ ಸ್ನೇಹಿತರಿಗೆ ಹೆಣೆದುಕೊಟ್ಟವರಿದ್ದಾರೆ. ರಾಶಿ ಹೂಗಳನ್ನು ನಸುಕಿನಲ್ಲಿ ಬಿಡಿಸಿತಂದು ಪ್ರಯಾಣದ ವಿರಾಮದಲ್ಲಿ ಕಟ್ಟಿ ಸ್ನೇಹಿತರ ಮುಡಿ ತುಂಬಿದವರಿದ್ದಾರೆ. ಟೈಲರಿಂಗ್‌ನ ಉಳಿದ ಕೈಕೆಲಸಗಳನ್ನು ಮಾಡಲು ಕೆಲವರಿಗೆ ಪ್ರಯಾಣಕಾಲವೇ ಪ್ರಶಸ್ತವೇಳೆ. ದಿನಪತ್ರಿಕೆ ಓದುವುದಕ್ಕೆ ನಿಯತಕಾಲಿಕಗಳನ್ನು ತಿರುವಿ ಹಾಕುವುದಕ್ಕೂ ಪ್ರಯಾಣಕಾಲವೇ ಕೆಲವರಿಗೆ ಅನುಕೂಲ ಸಮಯ. ರೈಲಿನಲ್ಲೇ ಸರ್ಕ್ಯುಲೇಟಿಂಗ್ ಲೈಬ್ರರಿಗಳನ್ನು ನಡೆಸುವವರೂ ಉಂಟು.

ಪಾಕಶಾಸ್ತ್ರ ತರಗತಿಗಳೂ ಉಂಟು. ಏನೆಂದರೆ ಪ್ರಯೋಗ ಮಾಡಲು ನಿಮ್ಮ ನಿಮ್ಮ ಮನೆಗೆ ಹೋಗಬೇಕು. ಸಾರಿಗೆ ಉಪ್ಪು ಹೆಚ್ಚಾದರೆ ಹೇಗೆ ಸರಿಪಡಿಸಬೇಕು

ಎನ್ನುವುದರಿಂದ ಆರಂಭವಾಗಿ ವಿವಿಧ ಭಕ್ಷ್ಯ ಭೋಜ್ಯ ತಯಾರಿಕೆಯವರಿಗೆ ಪುಕ್ಕಟೆ ಸಲಹೆಗಳು ಇಲ್ಲಿ ಧಾರಾಳವಾಗಿ ಸಿಗುತ್ತದೆ. ತಡವಾಗಿ ಎದ್ದರೆ ರೈಲಿಗೆ ಹೊರಡುವ ಅವಸರದಲ್ಲಿ, ಮಾಡಬಹುದಾದ ದಿಢೀರ್ ಅಡಿಗೆಗಳ ಪರಿಚಯವಿಲ್ಲಿ ಸಿಗುತ್ತದೆ.

ವೈದ್ಯ ಸಲಹೆಗಳಿಗೂ ಇಲ್ಲಿ ಬೇಕಾದಷ್ಟು ಜನರಿರುತ್ತಾರೆ. ಮನೆವೈದ್ಯದಿಂದ ಹಿಡಿದು ಪ್ರಮುಖ ವೈದ್ಯ ತಜ್ಞರ ತನಕ ಎಲ್ಲ ವಿಚಾರಗಳನ್ನು ನೀವು ಕೇಳದೆಯೇ ಕೊಡುವ ನಿಪುಣರಿರುತ್ತಾರೆ. ಯಾರು ತಾವು ಹೇಳಿದ ಔಷಧವನ್ನು ಪ್ರಯೋಗಿಸಿಕೊಳ್ಳುತ್ತಾರೆಂಬ ಪತ್ತೇದಾರಿಕೆಯನ್ನು ಮಾತ್ರ ನೀವು ಮಾಡುವ ಪ್ರಯಾಸ ಬೇಡ ಅಷ್ಟೆ, ಕುಟುಂಬ ಯೋಜನೆಯ ವಿಷಯದಿಂದ ಹಿಡಿದು ಭೂಕಂಪದವರೆಗಿನ ವಿಷಯಗಳ ವರೆಗೆ ನಿರರ್ಗಳವಾಗಿ ಹರಟುವ ಮಾತಿನ ಮಲ್ಲರು ನಿಮಗಿಲ್ಲಿ ಸಿಗುತ್ತಾರೆ.

ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಪಾರಿಭಾಷಿಕ ಶಬ್ದ ಕೋಶವಿರುವಂತೆ ನಿತ್ಯ ಸಂಚಾರಿ ರೈಲು ಪ್ರಯಾಣಿಕರ ಕೆಲವು ವಿಶಿಷ್ಟ ಪದ ಪ್ರಯೋಗವಿದೆ. ನಸುಕಿನ ರೈಲಿನಲ್ಲಿ ನೀವು ಕೂತಿದ್ದರೆ ಧಡಧಡನೆ ಹತ್ತಿದಾಕೆ ನಿಮ್ಮ ಬಳಿ ಬಂದು "ನೀವು ಕೂತ್ಕೋತೀರಾ, ಮಲಗ್ತೀರಾ" ಎಂದರೆ ಗಾಬರಿಯಾಗಬೇಡಿ. ರಾತ್ರಿ ಕೆಟ್ಟ ನಿದ್ರೆಯನ್ನು ನಸುಕಿನ ರೈಲಿನಲ್ಲಿ ತುಂಬಿಕೊಳ್ಳುವ ಇರಾದೆ ಅವರದು. ನೀವು ಮಲಗುತ್ತೇನೆಂದರೆ ಅವರು ಬೇರೆ ಅನುಕೂಲ ಜಾಗ ನೋಡಿಕೊಳ್ಳುತ್ತಾರೆ. ನೀವು ಕೂತಿರುತ್ತೇನೆಂದರೆ ನಿಮಗೆ ಬೇರೆ ಜಾಗ ತೋರಿಸಿ ಅವರು ಅಲ್ಲಿ ತಾವು ತಂದ ವರ್ತಮಾನ ಪತ್ರಿಕೆ ಹರಡಿ ಕೈಚೀಲವನ್ನೇ ದಿಂಬಾಗಿ ಶಾಲು ಹೊದ್ದು ಪವಡಿಸುತ್ತಾರೆ, ಅವರು ತಮ್ಮ ನಿಲ್ದಾಣದಲ್ಲಿ ಏಳದಿದ್ದರೆ ಎಂಬ ಆತಂಕ ನಿಮಗೆ ಬೇಡ. ಅದರ ವ್ಯವಸ್ಥೆ ಆಗಿರುತ್ತದೆ. ಇಲ್ಲ ಆರನೇ ಇಂದ್ರಿಯವೊಂದು ಸಕಾಲದಲ್ಲಿ ಅವರಿಗೆ ಎಚ್ಚರಿಕೆ ಕೊಟ್ಟೇ ಕೊಡುತ್ತದೆ. ಬೇರೆ ಬೆಳಗಿನ ರೈಲುಗಳಾದರೆ ನಿಮ್ಮ ಬಳಿ ಜಾಗ ಕೇಳಿ ಕೂತುಕೊಂಡು ಒಂಟೆಯಂತೆ ಇಷ್ಟಿಷ್ಟೇ ಹೆಚ್ಚು ಜಾಗ ಕಬಳಿಸುತ್ತಾ 'ನೀವೆಲ್ಲಿಗೆ' ಎಂದು ಕೇಳಿದರೆ ಪ್ರಯಾಣ ಕಾಲದಲ್ಲಿ ಹರಟೆಗೆ ಮಿತ್ರರೊಬ್ಬರು ಸಿಕ್ಕರೆಂದು ತಿಳಿಯಬೇಡಿ. ಅವರಿಗಿಂತ ಮುಂಚೆ ನಿಮ್ಮ ನಿಲ್ದಾಣ ಬರುವುದಾದಲ್ಲಿ ನಿಮ್ಮ ಜಾಗವನ್ನು ಆಕ್ರಮಿಸುವ ಹವಣಿಕೆ ಅವರದು. ಆಕಸ್ಮಾತ್ ರೈಲು ಕೈಕೊಟ್ಟರೆ ನಿರ್ಲಿಪ್ತರಾಗಿ ನಿಮ್ಮನ್ನು ಮರೆತೆದ್ದು ಹೋಗಿ ಬೇರೆ ಯಾವುದೇ ವ್ಯವಸ್ಥೆಯ ಕಪ್ಪಕ್ಕೂ ಮೈಯೊಡ್ಡುತ್ತಾರೆ. ಮಣ್ಣಿನ ಲಾರಿಯಾದರೂ ಸರೀ ಹಾಲಿನ ವ್ಯಾನಾದರೂ ಸರಿ. ಮಣ್ಣು ಧೂಳು ಕವಿದರೂ ಸರಿಯೇ ಹನಿಹನಿ ಹಾಲಿನ ಸ್ನಾನವಾದರೂ ಸರಿಯೇ. ಅವರುಟ್ಟ ಬಟ್ಟೆ ಅದನ್ನು ತಡೆದುಕೊಳ್ಳುತ್ತದೆ. ಒಟ್ಟಾರೆ ಅವರು ನಿರ್ದಿಷ್ಟ ಸಮಯಕ್ಕೆ ತಮ್ಮ ಊರು ಸೇರಬೇಕು ಅಷ್ಟೆ,

'ಅಲಂಕಾರ ಪ್ರಿಯೋ ವಿಷ್ಣುಃ ಈಶ್ವರೋ ಅಭಿಷೇಕ ಪ್ರಿಯಃ' ಎನ್ನುವ ಮಾತು ಒಂದಿದೆಯಲ್ಲ. ನಿಮಗೂ ಅಭಿಷೇಕದ ಭಾಗ್ಯ ಬೇಕೆಂದಿದ್ದರೆ ರೈಲಿಗೆ ಬನ್ನಿ. ಹಬ್ಬ ಹರಿದಿನಗಳಲ್ಲಿ ರೈಲಿನಲ್ಲಿ ಜನಸಂದಣಿ ಹೆಚ್ಚಾಗಿರುತ್ತದೆಂದು ನೀವು ಎಚ್ಚರ ವಹಿಸಿ ಮುಂಚಿತವಾಗಿ ಬಂದು ಸೀಟು ಹಿಡಿದು ಕೂತಿರುತ್ತೀರಿ. ರೈಲು ಎರಡನೇ ಕೂಗು ಕೂಗಿದಾಗ ಒಂದು ದೊಡ್ಡ ಗುಂಪು ನಿಮ್ಮ ಬೋಗಿಗೆ ಹತ್ತಿಕೊಳ್ಳುತ್ತದೆ. ಮಕ್ಕಳು ಮರಿ ಅಜ್ಜಿತಾತ, ಚಿಳ್ಳೆ ಪಿಳ್ಳೆಯು ಜೊತೆ ನೂರೆಂಟು ಸಾಮಾನು ಸರಂಜಾಮು. ರೈಲ್ವೆಯವರು ಸುಮ್ಮನೆ ಜಾಹಿರಾತು ಹಾಕಿರುತ್ತಾರೆ "ಕಡಿಮೆ ಸಾಮಾನು, ಸುಖ ಪ್ರಯಾಣ" ಎಂದು. ತಂದ ಸಾಮಾನುಗಳನ್ನು ಅವರಿವರ ಕಾಲಿನಡಿ ದೂಡಿ ಜೊತೆಯವರಿಗೆ ಹೇಳಿ ಎಚ್ಚರಿಕೆ ಕೊಟ್ಟು ಮಕ್ಕಳಿಗೆ ಸೀಟು ಹೊಂದಿಸಲು ಪರದಾಡುತ್ತಾರೆ. ಅವೋ ಅಪರಿಚಿತರ ಬಳಿ ಹೋಗುವುದಿಲ್ಲ. ಕೂತ ಜನ ಮಕ್ಕಳ ಜೊತೆ ದೊಡ್ಡವರಿಗೆ ಜಾಗ ಬಿಡಲು ತಯಾರಿರುವುದಿಲ್ಲ. ಎರಡು ಮಕ್ಕಳು ಹಸಿವೆಂದು ರಾಗ ತೆಗೆಯುತ್ತವೆ. ಹೊಟೆಲ್‌ನಲ್ಲಿ ತಿಂಡಿ ತಿನ್ನಿಸಲು ಅವಕಾಶವಿಲ್ಲದೆ ಸಮಯಸಾಲದೆ ತಿಂಡಿ ಕಟ್ಟಿಸಿ ತಂದಿರುತ್ತಾರೆ. ಇಡ್ಲಿ ಚಟ್ನಿ ದೋಸೆ ಮಾಮೂಲಿ. ಅದರಲ್ಲೊಂದು ಚಿಕ್ಕದು ಇಡ್ಲಿ ಸಾಂಬಾರ್ ಬೇಕು ಅಂತ ಹಠ ಹಿಡಿದು ಪ್ಲಾಸ್ಟಿಕ್ ಚೀಲಕ್ಕೆ ಹಾಕಿಸಿಕೊಂಡು ಬಂದಿರುತ್ತೆ. ಬರ್ತ್ ಮೇಲಿನ ಜಾಗ ತಿಂಡಿ ಹಂಚಲು ಪ್ರಶಸ್ತ ಸ್ಥಳವೆಂದು ಕಂಡು ಮೇಲೆ ಹತ್ತಿದರೆ ನೀವು ಬೇಡವೆನ್ನಲಾದೀತೆ? ತಾಯ್ತನದ ಮಮತೆಯಿಂದ ಆ ಬಾಲ್ಕನಿ ಬಂಧುಗಳು ಹಸಿದ ಮಕ್ಕಳಿಗೆ ತಿಂಡಿಕೊಟ್ಟು ತೃಪ್ತಿಯಿಂದಿರುವಾಗ ಮೂರನೇ ಗಂಟೆ ಹೊಡೆದು ಸೀಟಿ ಹೊಡೆದ ರೈಲು ದಢಗುಟ್ಟಿ ಮುಂದೆ ಚಲಿಸುತ್ತದೆ. ಏನಾಯಿತೆಂದು ನಿಮಗೆ ಗೊತ್ತಾಗುವಷ್ಟರಲ್ಲಿ ಸಾಂಬಾರಿನ ಅಭಿಷೇಕ ಆಗಿರುತ್ತದೆ. ಕೂಗಾಡಬೇಡಿ ಸಹಿಸಿಕೊಳ್ಳಿ. ನಿಮ್ಮ ಕಛೇರಿಯಲ್ಲೋ ಮನೆಯಲ್ಲೋ ಈ ವಿಷಯ ಹೇಳಿ ಈ ರಸಪ್ರಸಂಗವನ್ನು ಹಂಚಿಕೊಳ್ಳಿ. ಏಕೆಂದರೆ ಇದು ಪ್ರಯಾಣ ಕಾಲ.

ಬೋಗಿ ಬೋಗಿಗಳಿಗೊಂದೊಂದು ವಿಶೇಷ ಇರುತ್ತದೆ. ಕೆಲವು ಬೋಗಿಗಳಲ್ಲಿ ಯಜ್ಞೇಶ್ವರರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿಕೊಂಡಿರುತ್ತಾರೆ. "ಸಮಾನಶೀಲ ವ್ಯಸನೇಷು ಸಖ್ಯಂ" ಇಡೀ ಬೋಗಿ ಬೀಡಿ ಸಿಗರೇಟುಪ್ರಿಯರ ಧೂಮಲೀಲೆಯ ಆಡುಂಬೊಲವಾಗಿರುತ್ತದೆ. ಧೂಮಪಾನ ನಿಷೇಧಿಸಿದೆ ಎಂಬ ಫಲಕವಿದ್ದರೂ ಬಸ್ಸಿನಲ್ಲೇ ಡ್ರೈವರ್ ಕಂಡಕ್ಟರ್ ಮೊದಲಾಗಿ ಸಿಗರೇಟು ಸೇವನೆಯಲ್ಲಿ ತಲ್ಲೀನರಾಗಿ ಅವರು ಬಿಡುವ ಹೊಗೆಯಲ್ಲಿ ನಿಮ್ಮನ್ನು ಬಂಧಿಸಿಟ್ಟಿರುತ್ತಾರೆ. ಹಾಗಿರುವಾಗ, ಈ ಫಲಕವಿಲ್ಲದ ರೈಲಿನಲ್ಲಿ ಅವರನ್ನು ಯಾರು ತಡೆಯಬಹುದು ? ನೀವೇ ಮುಂದಿನ ನಿಲ್ದಾಣದಲ್ಲಿ ಬೇರೆ ಬೋಗಿಯನ್ನು ಹುಡುಕಿಕೊಂಡು ಹೋಗಬೇಕು. ಒಂದು ಸಲ ನಾ ಕೂತಿದ್ದ ಬೋಗಿಗೆ ಒಬ್ಬ ಪ್ರಯಾಣಿಕ ಹತ್ತಿದ. ಹತ್ತುತ್ತಿದ್ದಂತೆ ಬೀಡಿ ಹಚ್ಚಿಕೊಂಡ. "ನಮಗೆ ತೊಂದರೆ ಆಗುತ್ತೆ, ಬೀಡಿ ಆರಿಸಿ" ಎಂದು ಹೇಳಿದ್ದಕ್ಕೆ 'ನಾನು ಟಿಕೆಟ್ ತೊಗೊಂಡಿ

ದ್ದೀನಿ' ಎನ್ನುವುದೆ ? ಟಿಕೆಟ್ ಕೊಂಡರೆ ಬೀಡಿ ಸಿಗರೇಟು ಸೇದಲೂ ಪರವಾನಗಿ ಎಂದು ಭಾವಿಸಿದ್ದನೋ ಏನೋ. ಇನ್ನೇನು ಮಾಡುವುದು ಕಿಟಕಿಯಿಂದ ಹೊರಕ್ಕೆ ಮುಖವೊಡ್ಡಿ ಹೊರಗಿನ ಗಾಳಿಗೆ ಮೂಗು ಕೊಟ್ಟಿದ್ದಾಯಿತು.

ಇನ್ನೊಂದು ಬಗೆಯ ಡಬ್ಬಿ ಇದೆ. ಅಲ್ಲಿನ ಧರ್ಮರಾಯರು ಯಾವುದೇ ಕಾರಣಕ್ಕೂ ಕಿಟಕಿ ತೆರೆಯಲೂ ಬಿಡುವುದಿಲ್ಲ. ನಿಮ್ಮ ನಿಲ್ದಾಣದಲ್ಲಿ ಸಲೀಸಾಗಿ ಇಳಿಯಲೂ ಜಾಗ ಬಿಡದಂತೆ ಚಿತ್ರಮೂಲನ ಕೋಟೆ. ಕಟ್ಟಿಬಿಟ್ಟಿರುತ್ತಾರೆ. ಮಕ್ಕಳು ಮರಿಯನ್ನು ಪ್ರಕೃತಿ ಕರೆಗೆ ಕರೆದೊಯ್ಯಲೂ ಸಹ ಆ ಧರ್ಮರಾಯರ ಒಪ್ಪಿಗೆ ಅಪ್ಪಣೆ ಬೇಕು. ನಿಮಗೆ ಇನ್ನೂ ಗೊತ್ತಾಗಲಿಲ್ಲವೇ ? ನಾನೇ ಹೇಳುತ್ತೇನೆ. ಅದು ಇಸ್ಪೇಟು ಗೆಳೆಯರು ಕಟ್ಟಿರುವ ಕೋಟೆ. ಬರಿದೆ ನಿತ್ಯ ಪ್ರಯಾಣದಲ್ಲಿ ಕಾಲ ಕಳೆಯಲೆಂದು ಆಡುವವರು ಕೆಲವರು. ದುಡ್ಡಿಟ್ಟು ಆಡಿದರೆ ರಂಗೇರುತ್ತದೆಂದು ಬಾಜಿ ಕಟ್ಟುವವರು ಕೆಲವರು, ಕಿಟಕಿ ತೆರೆದರೆ ಗಾಳಿಗೆ ಎಲೆ ಹಾರುತ್ತವೆಂದು ಭದ್ರವಾಗಿ ಮುಚ್ಚಿ ಬಿಡುತ್ತಾರೆ. ಸೆಖೆಯೆಂದು ಪಂಖವನ್ನೂ ತಿರುಗಿಸುವಂತಿಲ್ಲ. ಆಟ ಶುರುವಾಗ ಬಿಟ್ಟರೆ ಮುಗಿಯುವವರೆಗೆ ಅಕ್ಕಪಕ್ಕದವರಿಗೆ ಅಲ್ಲಾಡಲೂ ಬಿಡುವುದಿಲ್ಲ. ಅಲ್ಲಾಡಿದರೆ, ಎದ್ದರೆ ಬೇರೇ ಬೇರೆ ಆಟಗಾರರ ಎಲೆಗಳು ಕಂಡು ಬಿಡುತ್ತದಲ್ಲ. ಇವರು ಹೆಚ್ಚಾಗಿ ಆಡುವುದು ರಮ್ಮಿಯಾಟ. ಕೆಲವರು ಇಟ್ಟ ದುಡ್ಡು ಕಳೆದುಕೊಳ್ಳುತ್ತಾರೆ. ಇನ್ನು ಕೆಲವರು ಅಂದಿನ ಊಟ ತಿಂಡಿಯ ಖರ್ಚು ಗಿಟ್ಟಿಸುತ್ತಾರೆ. ಇಬ್ಬರ ಮೊಣಕಾಲ ಮೇಲೆ ಪುಟ್ಟ ಬ್ರೀಫ್‌ಕೇಸ್ ಇಟ್ಟು ಎಲೆಯಾಟಕ್ಕೆ ಟೇಬಲ್ ಕಟ್ಟಿಕೊಳ್ಳುತ್ತಾರೆ. ಕೆಲವು ಟಿ. ಸಿ. ಗಳು ಇವರಿಗೆ ದಂಡ ಹಾಕುವುದುಂಟು. ಆದರೆ ಇನ್ನು ಕೆಲವರು ಅವರೊಂದಿಗೆ ಸೇರಿ ಆಡಲು ಕೂತುಕೊಳ್ಳುತ್ತಾರಲ್ಲ. ಆಟಕ್ಕೆ ಅತಿ ರಂಗೇರಿದರೆ ತಾವು ಇಳಿಯಬೇಕಾದ ನಿಲ್ದಾಣ ಬಂದರೂ ಆಟ ಬಿಟ್ಟೇಳದೆ ಮುಂದಿನ ನಿಲ್ದಾಣದಲ್ಲಿ ಇಳಿದು ವಾಪಸು ಬಂದವರಿದ್ದಾರೆ.

ಅಮೃಂದಿರ ಬ್ಯಾಗ್ ಬಗ್ಗೆ ಹೇಳದಿದ್ದರೆ ನಿತ್ಯ ಸಂಚಾರದ ಸ್ವಾರಸ್ಯ ಪೂರ್ಣವಾಗುವುದಿಲ್ಲ. ಬಾಲಕೃಷ್ಣ ಬಾಯಲ್ಲಿ ತಾಯಿಗೆ ವಿಶ್ವರೂಪದರ್ಶನ ಮಾಡಿಸಿದನಂತೆ ಈ ಬ್ಯಾಗುಗಳಲ್ಲಿ ಬೆಳಗಿನ ತಿಂಡಿ ಮಧ್ಯಾಹ್ನದ ಊಟ ಕುಡಿಯುವ ನೀರು ಒಂದು ಮುಖ್ಯ ಭಾಗವಾದರೆ, ಬರವಣಿಗೆ ಸಾಧನಗಳು ಬೀಗದ ಕೈಗೊಂಚಲು ರೈಲ್ವೇಪಾಸ್ ಸಿಟಿಬಸ್ಸಿಗೊಂದಿಷ್ಟು ಚಿಲ್ಲರೆ ಕಾಫಿ ಟೀ ರಿಕ್ಷಾಗೆ ಒಂದಿಷ್ಟು ದುಡ್ಡು ಇನ್ನೊಂದು ಮುಖ್ಯ ಭಾಗ. ಇವಲ್ಲದೆ ಪುಟ್ಟದೊಂದು ಪೆನ್ ಟಾರ್ಚು ಮಡಚುವ ಕತ್ತರಿ ಅಥವಾ ಚಾಕು, ಬಾಚಣಿಗೆ ಹಣೆ ಬೊಟ್ಟು ಪುಟ್ಟ ಕನ್ನಡಿ ಒಂದಿಷ್ಟು ಕೈವಸ್ತ್ರ ಪುಟ್ಟ ಪೌಡರ್ ಡಬ್ಬಿ, ಕಟ್ಟಿದ ಗೊಗ್ಗರು ಗಂಟಲನ್ನು ಬಿಡಿಸಲು ಇಷ್ಟು ಕಾಳು ಮೆಣಸು ಕಲ್ಲುಸಕ್ಕರೆ ಒಣಸುಂಟಿ, ವಿಕ್ಸ ಅಮೃತಾಂಜನ ವಾಸಲೀನ್ ತಲೆಮುಳ್ಳು ವಿವಿಧ

ಆಕಾರದ ಬಟ್ಟೆ ಪಿನ್ನುಗಳು ಒಂದೋ ಎರಡೋ ಕೇರ್ ಫ್ರೀ ಹೀಗೇ ಪತ್ತಾರು ಸಾಮಗ್ರಿಗಳನ್ನು ತನ್ನ ಹೊಟ್ಟೆಯೊಳಗೆ ತುಂಬಿಕೊಂಡು ಗಂಭೀರತೆಯ ಪೋಸು ಕೊಟ್ಟಿರುತ್ತವೆ. ಸೂಜಿದಾರವೂ ಕೆಲವರ ಕೈಚೀಲದಲ್ಲಿರುತ್ತದೆ. ಏಕೆನ್ನುತ್ತೀರೊ? ಹತ್ತುವ ಇಳಿವ ಅವಸರದಲ್ಲಿ ಕಾಲಿಗೆ ಸಿಕ್ಕ ಸೀರೆ ಅಂಚು ಸೀಳಿ ಹೋದರೆ ದಿಢೀರನೆ ಎರಡು ಟಾಕು ಹಾಕಲು ಬೇಡವೆ? ಮನೆ ಸೇರುತ್ತಿದ್ದಂತೆ ಮಕ್ಕಳು ಕಾಡಿದರೆ ಅವರ ಕೈಗಿಡಲು ಪೆಪ್ಪರಮೆಂಟೋ ಚಾಕಲೇಟೋ ರೈಲಲ್ಲಿ ಸಿಗುವ ಹುರಿದ ಕಡಲೇಕಾಯೋ ಚೀಲದಲ್ಲಿಲ್ಲದಿದ್ದರೆ ಹೇಗೆ? ಇವನೆಲ್ಲ ತುಂಬಿಕೊಳ್ಳಲು ಅಮ್ಮಂದಿರ ಸೀರೆ ರವಿಕೆಗೆ ಜೇಬುಗಳಿಲ್ಲವಲ್ಲ. ಅದಕ್ಕೆ ಇಂಥ ದೊಡ್ಡ ಕೈಚೀಲಗಳು.

ಕಛೇರಿಯಲ್ಲೊಮ್ಮೆ ಅನಿವಾರ್ಯ ಕೆಲಸದೊತ್ತಡವಿದ್ದು ಮಾಮೂಲಿನ ರೈಲಿಗೆ ಬರಲಾಗದೆ ಇಳಿಸಂಜೆಯ ರೈಲಿಗೆ ಬರಬೇಕಾಯಿತು. ನನ್ನ ಕಿರಿಯ ಸಹೋದ್ಯೋಗಿ ಒಬ್ಬರು ಕರುವನ್ನು ಬಿಟ್ಟು ಬಂದ ಪುಣ್ಯಕೋಟಿಯ ತವಕದಲ್ಲಿ ಚಡಪಡಿಸುತ್ತ ಇದ್ದರು. ಅವರ ಪರದಾಟ ನೋಡುತ್ತ ಹೇಗೆ ಸಮಾಧಾನ ಹೇಳುವುದೋ ಗೊತ್ತಾಗದೆ ಸುಮ್ಮನೆ ಕುಳಿತಿದ್ದೆ. ನಮ್ಮ ಎಕ್ಸ್‌ಪ್ರೆಸ್ ರೈಲು ತನ್ನ ವೇಗವನ್ನು ಕುಗ್ಗಿಸಿ ಒಂದು ಸಣ್ಣ ನಿಲ್ದಾಣದಲ್ಲಿ ಟೋಕನ್‌ರಿಂಗ ತೆಗೆದುಕೊಂಡು ಮುಂದೆ ಸಾಗಬೇಕಾಗಿತ್ತು. ಅಂದು ಆಕಸ್ಮಾತ್ ರಿಂಗ್ ಜಾರಿ ಬಿದ್ದು ಪಕ್ಕದ ಹಳುವಿನ ಕತ್ತಲಲ್ಲಿ ಎಲ್ಲೋ ಸೇರಿಹೋಯಿತು. ವೇಗ ಹೆಚ್ಚಿಸಿಕೊಂಡಿದ್ದ ರೈಲಿಗೆ ಟೋಕನ್ ಕಳೆದು ಹೋದದ್ದರ ಅರಿವಾಗಿ ನಿಂತು ಹಿಂದೆ ಬಂದು ಹಳುವಿನಲ್ಲಿ ಟೋಕನ್ ಹುಡುಕಿ ಮತ್ತೆ ಹೊರಟಾಗ ರೈಲು ಇಪ್ಪತ್ತು ನಿಮಿಷ ಲೇಟು. ಸಂಜೆಯಾಗುತ್ತ ಬಂದಂತೆ ಬಾಗಿಲ ಕಟಕಟೆಯಲ್ಲೇ ನಿಂತು ತನಗಾಗಿ ಕಾಯುವ ಕೈಕೂಸಿನ ನೆನಪಲ್ಲಿ ಎದೆಬಿಗಿತ ಹೆಚ್ಚಾಗಿ ನನ್ನ ಸಹೋದ್ಯೋಗಿಯ ಕಣ್ಣಲ್ಲಿ ನೀರಾಡಿತು. 'ಮೇಡಂ ಇವತ್ತೇ ಹೀಗಾಗಬೇಕಾ?' ಎಂದು ನೊಂದುಕೊಂಡ ಆ ಚೊಚ್ಚಿಲ ಬಾಣಂತಿ ತಾಯಿಗೆ ಹೇಳಿದೆ—"ರೈಲು ನಿಯಮವನ್ನು ನಾವು, ಪ್ರಯಾಣಿಕರು, ಬದಲಾಯಿಸುವಂತಿಲ್ಲ ಸಖಿ. ಇದು ಪ್ರಯಾಣ ಕಾಲ."

ಕೆ. ಆರ್. ಆನಂದ

# ಹೀಗೊಬ್ಬ ಸಾಕ್ರಟೀಸ

೧

ನನ್ನ ಮನೆ ನೇರಕ್ಕೆ ನಡುಬೀದಿ
ತಿರುವು ಪಕ್ಕದಲ್ಲೊಂದು ಸಣ್ಣ ತಿಪ್ಪೆಯು
ಹರವು, ನಿಂತು ನೆಲೆ ನಡುವಿನ ಮರ
ಶತಮಾನವಿರಬೇಕು ತಲೆಮಾರ
ನೆನಪಿಗೊಂದದು ಗುರುತು.

ಕಣ್ಣಿಟ್ಟ ಬೆಳಕಿಗೆ ಅಂದು ಅವತರಿಸಿದ್ದ
ಅವಧೂತನೊಬ್ಬ ಅನುಭಾವಿ–
ಯಿರಬೇಕೆನಿಸಿತ್ತು ಜನಕ್ಕೆ ಜಡೆ ನೋಡಿ
ಮಡಿಯಾಗದ ಮಣ್ಣಾಳದ ಮನುಷ್ಯ
ಮೊದಲ ನೋಟದ ಕುರಿ ಬೆದರಿ ಮುಸ್ಸಂಜೆ–
ಯಾಗಸಕೆ ಕಪ್ಪು ತೇಪೆಯು ನೆರಳು.

ಒಂದೆರಡು ಮೂರುದಿನ ಬಿಕ್ಕೆ ಬೇಡಿರಲಿಲ್ಲ
ಮೇಲ್ರಾಕು ಬಟ್ಟಲ ಮೂಲೆಗೆ ಮೂರೆಲೆ ಹರುಕು-
ಕವಳ; ಮಟಗುಡುವ ತುಟಿಯುಡಿಯಲಿ
ಉದುರಿದ್ದು ಬೀಜ ಮಂತ್ರವೇ ? ಬಯಕೆ ಶಪಿಸಿದುವೆ ?

ಮೊನ್ನೆ ಸಂಜೆಗೆ ಹೊತ್ತು ನನ್ನ ಹೆಜ್ಜೆಗಳೊಡನೆ
ಹೆಜ್ಜೆ ಹಾಕಿಯೆ ಬಂದ ಪಕ್ಕ ತಡೆತಡೆದು
ಹೇಳಿದ್ದು 'ಹೇಗಿದ್ದೀರಿ ನೀವೀಗ...?'...
ಕಟ್ಟಲಾಗದ ಕವನ ಕಾಡದಾರಿಗೆ ನಡೆದು...

ನಕ್ಕ ಹುಂಬನಗೆ ಖಾಲಿ ಕಳಗಳಿ–
ಸವೆದ ಚಪ್ಪಲಿ ತಳ ಸಾರಿ ಹೇಳಿತ್ತು
ನಡೆ... ನೆವ ಬೇಕೆ ಮಾತಿಗೆ ? ಇವನಾರು,
ಬಂದವನೇ, ನೆಲದುದ್ಭವವೇ ?... ಕೇಳಿದ್ದು ನನಗೇ ತಾನೇ !

... ಇದೇನೆ ಹ್ಹ...ಹೀಗೇ ನಡೆದಾಡಿ...ಓಡಿದಾಡಿ
ಬಿಮ್ಮನೆ ಬಿಂಕ ಬಿಡದೇ ಬೆದೆಯ ಬಯಕೆಗೆ
ಬೆದರಿಕೆಗೆ ಬೆಂಡಾಗದೇ ... ಹೊಸೆದ ಕವನಕ್ಕೆ
ಹೊಸದರ್ಥ ಕಲ್ಪಿಸದೇ ಕೂಸಿಗೆ ಕೆಸರಕಟ್ಟಿ...
...ಛೆ, ಹೇಳಲಾದೀತೇ ? ಬೀದಿ ಭಿಕಾರಿಗೆ ?

ಅವನೂ ನಕ್ಕ 'ಸಂಜೆ ಕಾಣುವೆ ಮತ್ತೆ..'
ಮುಂದುಕ ಪರುಳಿರಬೇಕು.. ಮೊದಲೊಮ್ಮೆ
ಮದುವೆಯಾಗಿರಬೇಕು, ಮೊಮ್ಮಗುವಿಗೆ ಮುದ್ದಲ್ಲವೇ
ಮೊಗದ ಹಿಡಿಗಡ್ಡ.. ಕೆಂಜೆಡೆ..
ಕವನ ಕೆಟ್ಟುದೇಕೋ ?

೨

ಮತ್ತದು ಮುಳಿಗೆದ್ದುದು ಮೂರುಬಾರಿ ದಿನ
ಮಣೆ, ಮಣ್ಣಾದ ಮನಸಿಗೆ ಮನೆಯೋ
ಬೇಸರದ ಆಕಳಿಕೆ ಸಂಜೆಗೆ ಮರದ ನೆರಳು
ಭಿಕಾರಿಯು ಪಾತ್ರೆಮೆ ಲೆ, ನಿಂತಿರಲಿಲ್ಲ ಅವನ ಹೆಜ್ಜೆ

ಅಂದು ಮುಂಜಾನೆ ರಸ್ತೆಯುಡೀ ನಡೆದಾಡಿ
ಕವನ ಕಟ್ಟಿದೆ ಕೂತು ಟೀಪಾಯಿಗೆ ಕುಕ್ಕಿ...ಕುಕ್ಕಿ
ಎದುರು ನಿಂತಿದ್ದನವ ನಗದೇ ನಕ್ಕನಗೆ
ಎದೆ ಬಳುಕಿ ಹೊಟ್ಟೆ ಹುಣ್ಣಾಗದೇ ಹಸೀ...ಹಸೀ...

ಮೊನ್ನೆ ಬರುತ್ತಿದ್ದೆ. ಇರಲಿಲ್ಲ ಮರದ ಬಳಿ
ಕಾದು ನೋಡಿದೆ ಕವನ ಕಟ್ಟುವ ದಿನ, ಕಣಿವೆ
ಕಾಡುಗಳಿದು ಕೋಟೆ ಹತ್ತಿದ್ದೆ ನೋಡು ಸುರಂಗದ
ಬಾಯಿ ತೆರೆದಿಟ್ಟಂತೆ ಮಾತ ಬರಿವ್ಯೆ.

ಎಷ್ಟು ವರ್ಷದ ಗುರುತು ಮರೆತು ಹತ್ತೀತೇನೋ
ಲೆಕ್ಕ ನೋಡಿದೆ ಮತ್ತೆ ಮತ್ತೆ ಅವನೇ...ಆದರೆ
ಸಂತ ಪ್ರವಾದಿ, ಮುಹಾಮೂಲದ ಮಹರ್ಷಿ ಅಲ್ಲ,
ಭಿಕಾರಿ, ಬೇಕು ಬೇಡವೆನಿಸದೆ ಬಳಿ ಬಂದವ
ಬದುಕು ಕಾಡಿದ ದಿನ ಕವನ ಕಟ್ಟೆಯ ಬಳಿ.

ಹದ್ದಲ್ಲ ಆವನಕ್ಷಿ ಕವನ ಕಾಣಲು ಕೂತು
ಬೆಂಕಿ ಬೀಡಿರಬೇಕು ಕಟ್ಟಿಗೆಗೆ ಕವನ ಸುರಿಯಲು
ಧಿಗ್ ಧಗ ಧಗೆಂದು ದಿಕ್ಕುಗಳಿಗೆ ನಡೆನಡೆದು ಏನಂದ?
ಸುರಂಗ ಬಾಯಿ ತೆರೆದಿಟ್ಟಂತೆ
ಕೂತವನ ಮುಂದೊಂದು ಪದ್ಯ ಬರೆದೆ.

ಅವನ ಪದ್ಯವೇ ಮೊನ್ನೆ ನಸುನಕ್ಕದ್ದು
ನೇರ ನಡೆದದ್ದು ಬರೆವ್ಯ ಬಾಹುಲಿಗೆ ಬೊಕ್ಕ
ಬೋರಲಾದುದು ಮಣ್ಣ ವಾಸನೆಗೆ ಮರಳಿ ಹೊರಳಾಡಿದ್ದು
ಸಾಜೆಗೆ ಬರದೇ ಕಾಡಿ ಕಾಡಾಗಿದ್ದು...ಕವಿತೆ ಕೆಂಜೆಡೆ !

ಅವನಿಗದು ಕೋಪ ತುದಿರಬೇಕು ಕೆರಳಿ, ಕೆನ್ನಾಲಿಗೆಗೆ
ಎದೆ ಬಡಿದು ಬದುಕು ತೆರೆದಿಟ್ಟಂತೇ...ತರಳ
ತೆಗೆತೆಗೆ ತಪ್ಪಲ್ಲ ಈ ತೆವಲು ತಲೆಗೆ
ತಿಕ್ಕಲಾಸಾಮಿ ತಡೆಯೀಗ ಸರದಿ ನನಗೆ.

...ತೆರೆತೆರೆದಿಟ್ಟಂತೆ ಅಲೆ ಅಲೆದಾಡಿದಂತೆ ಮಣ್ಣು
ಮಸಣದ ಮಹಲು, ಪರಪರ ಹರಿದ ಹಾಳೆಯು
ಗಾಳಿ ಬೆಳಕಿನ ಭಳಕು ಸೌಧದ ಸೌದೆ ಕೊನರೀತು
ಸತ್ತ ಮುಖದವನ ಗಡ್ಡಕ್ಕೆ ಬೇರಿಟ್ಟು !?

ಎಲ್ಲ ಬದಲಾಗಿತ್ತು, ಮೂಕ ಮಹಲಿಗೆ ಮಾತು;
ಮಸಣದಲ್ಲೆಲ್ಲಾ ಮಲೆನಾಡು ಮೊಲೆ ತೊಟ್ಟಿಕ್ಕಿ
ದಂತೆ ಹಾಲು ಹೊಳೆ ಹರಿದು ಹಾಲಾಹಲಕ್ಕೆ ಹಲಗೆ
ಬಡಿದೆಚ್ಚರಿಸಿ ಢಾಗು...ಡಕುಣ ಡಕುಣ ಡಕುಣ

ನಿಂತು ನೋಡಿದರೆ ನೆಲತುಂಬಿ ಸಭ ಮಾಲಗಿ ಮೇಲೆ
ಯುಗಲ ಮನೆ ಮಹಲಿಗೆ ಮಾತೇ ಮಾತು,
ಮಧುವುರುಳಿ ಹೊರಳಿ ಹರಳಾಗಿ ಗಂಟಲಿಗೆ
ಸಿಕ್ಕಲಾರದೇ ಸಿಕ್ಕ ಅಮೃತದ ಜೀವಧ್ವನಿ.
ಮಹಲ ಮೂರೂ ಮುಕ್ಕಾಲು ದಿಕ್ಕಿಗೆ...

ಮೊದಲಿತ್ತು ಅಲ್ಲಿ ಕೆಂಗಣ್ಣಿನ ಕನಸು ಕೊಳಕು ಮಂಡಲ
ಗತ್ತು... 'ಗೊತ್ತಯ್ಯ ನೀನು ತುಂಬಲಾರೆ ಮಾತು

ಮಹಲಿಗೆ ಮನೆ ಮಸಣಗಳಿಗೆ, ಅಲೆದಾಡಿದ ಜೀವಕ್ಕೆ
ತಣ್ಣನುಸಿರು ಬಿಡು, ಪದ್ಯ ಪರ್ವತದ ಜಲ್ಲಿ ಮರಳು

ಮತ್ತವ ನಕ್ಕ ನಗೆ ವಿಷಣ್ಣವೇ, ವಿಷಾದವೇ
ವಿಧಿಕಾಣದ ವಿರೋಧವೇ, ಅಸಂಗತಕ್ಕೊಂದು ಷಂಢ
ಸಾಧನೆಯೇ. ಗಂಟಲಿಗಿಳಿದ ಮಾತು ಹೆಪ್ಪಾಗದೇ
ಮೌನ ಮೂಕವಾದುದೆ ಪದ್ಯ ?
ಪ್ರಾಸ.. ಪಸೆಗಟ್ಟಿದ ಪ್ರಾಶನದ ವಿಷ !

ನೇರ ನಡೆದನವ ನಗದೇ ನಗಿಸದೇ ನಕ್ಕವರ
ನಗೆಗುಳಿಸಿ ಗಾಳಿ ತಾಳಗಳಲ್ಲಿ ತೋಂತದ್ದಿನ್
ತೋಂತದ್ದಿನ್ ತೋಂತದ್ದಿನ್ ಧಿಕಿತಕತರಿಕಿಟ ತೋಂತದ್ದಿನ್
ತೋಂ....ತ...ದ್ದಿ...ನ್SSS
ನನ್ನೆದುರಿಗೀಗ ಮುರುಕು ಮಡಕೇ, ಮಾರ !!!

## ಕರುಣಾಕರ ಮದ್ರಾಸು

---

## ಈಗೀಗ

ಈಗೀಗ
ಹೊಸವರುಷದ ಹಿಂದಿನ ಬೈಗು
ಸೂರ್ಯ ಜಾರಿದಾಗಲೆಲ್ಲ ಮೂಡುತ್ತದೆ
ಎದೆಯ ಕನ್ನಡಿಯಲೊಂದು ಮಬ್ಬಾದ ಬಿಂಬ—

ಕಂಟದಂಥ ಗಾತ್ರ, ಕುರುಚಲುಕಾಡು ತಲೆ
ಮುಖದ ತುಂಬ ಹಳೆವರುಷದ ಮೋಡವೆ ಕಲೆ.
ಮಧ್ಯ ಒಂದೇ ಕಣ್ಣು —
ಆಗಲೋ ಈಗಲೋ ಎಂಬ ಮಿಣುಕು ದೀಪ

ಅದರಾಚೆ ಒಳಗೆ ಹಣಕಿದರೆ
ಲೆಕ್ಕವಿಲ್ಲದಷ್ಟು ವಸಂತಗಳುದ್ದಕ್ಕೂ ಸುಟ್ಟ ಕನಸುಗಳ ಬೂದಿ
ಆಳದಲಿ ಮುಚ್ಚಿದ ಕೆಂಡ.

ಮೇಲೆಲ್ಲ ಹೊಂದಾಣಿಕೆಯಿಲ್ಲದ ಬಣ್ಣಗಳ ತೇಪೆಯ ಕವಚ
ಸಂದುಗೊಂದುಗಳಲಿ ತೂತು
ಕೈಯಿಳಿಬಿಟ್ಟರೆ ಥಣ್ಣನೆ ತಗಲುವ ಒಳಗಿನ ಮೂಳೆ—
ಖಣ ಖಣಿಸುತ್ತವೆ ಎತ್ತಿಟ್ಟ ಒಂದೊಂದು ಹೆಜ್ಜೆಗೂ.
ಮನೆಯಲಿ
ಬೆಳಕಿಂಡಿಯ ತುಂಬ ಮಸಿ
ಇದ್ದ ಬಿದ್ದ ಸಂದನ್ನೆಲ್ಲ ಕಾಸಿ ಬೆಸೆದಿದ್ದೇವೆ
ಎಂದೆಂದಿಗೂ ತೂರಿಬರದಿರಲೆಂದು ಸೂರ್ಯಕಿರಣದ ಬಿಸಿ.

ಗೋಡೆಯಲೆಲ್ಲ ಗುಂಡಿನೇಟಿನ ತೂತು
ತೂತುಗಳ ತುಂಬ ಹಾವು ಚೇಳು—
ಆಸರೆಗೆ ಒದಗಿದವರಿಗೆಲ್ಲರಿಗೆ
ವಿಷವೇರಿಸಿಬಿಡುತ್ತವೆ! ಆದರೆ ಕೊಲ್ಲುವುದಿಲ್ಲ.

ಹೀಗೆ…ಇನ್ನೂ…ಹೇಗೆ ಹೇಗೋ……..
ನೆಲ ನೀರು ಗಾಳಿಯ ತುಂಬ ಸಾವಿನ ಮೊಟ್ಟೆಗಳನಿರಿಸಿ
ನಾವು ಕೂತಿದ್ದೇವೆ ಮೈಯೆಲ್ಲ ಕಣ್ಣಾಗಿ.
ನೆರೆಯವನ ಮೇಲೆ ಸದಾ ಹದ್ದುಗಣ್ಣಿನ ಪಹರೆ.

ಈ ಎಲ್ಲದರ
ನಡುವೆ
ಒಂದೊಂದು ಬದುಕಿಗೂ ಮರಣ ಗಂಟೆಯ ನುಡಿವ
ಗೋಡೆ ಗಡಿಯಾರ ಢಣ್ ಎಂದಾಗ
ನಟ್ಟನಡುವಿರುಳೂ ಪಿಳಿ ಪಿಳಿ ನೋಡುತ್ತಾ ಕೈಯಲಿ ಗ್ಲಾಸನ್ನೆತ್ತಿ
ಕೂತಲ್ಲಿಂದಲೇ ಕಾಲನಿಗೆ ಸ್ವಾಗತ ಹೇಳುತ್ತ
ನೋಡುತ್ತೇವೆ ಗಡಿಯಾರದತ್ತ ಗತ್ತಿನಲಿ -
ಸಾವಿಗಿನ್ನೆಷ್ಟು ಹೊತ್ತು,
ಆಯುಸ್ಸು
ಉಳಿದುದೆಷ್ಟು ?

## ಕೊಂಪಿ ಗುರುಬಸಪ್ಪ

# ನಿರಾಶೆ

ನಕ್ಕವರೊಂದಿಗೆ ನಾವೂ ನಕ್ಕಿದ್ದೆವು
ನಮ್ಮ ಮನಸುಗಳ ಮೂಲೆಗೆ ಉಕ್ಕಿ
ಮಾತನಾಡಿದವರ ಕೂಡ ನಾವೂ ಮಾತನಾಡಿದ್ದೆವು
ಬಣ್ಣ ಹಚ್ಚಿ
ಕಷ್ಟ ದುಃಖಗಳಿದ್ದರೂ ಬೆಳಕು ಹಚ್ಚಿ.

ನಮ್ಮ ನಗೆಗಳಿಗೆ ಸಂತೋಷ ಮೂಡಲಿಲ್ಲ
ಉಕ್ಕಿದ ಮನಸುಗಳು ಚಿಗುರೊಡೆದು
ಮೇಲೇಳಲಿಲ್ಲ.
ಎಷ್ಟೊಂದು ಕನಸುಗಳ ಹಾರಿ ಬಿಟ್ಟಿದ್ದೆವು
ನಮ್ಮ ಬಹು ಆಶೆಗಳ ಬಂಧಿಸಿಟ್ಟು.

ಹಾರಿಬಿಟ್ಟ ಕನಸುಗಳು ಮರಳಿ ಬಂದವು
ನಮ್ಮ ಬಳಿಗಲ್ಲ

ಬಂಧಿಸಿಟ್ಟ ಆಶೆಗಳು ಬಸುರೊಡೆದವು
ನಮ್ಮ ಬೆದೆಗಲ್ಲ
ದುಡಿದೇ ದುಡಿದೆವು ಹದಗೊಂಡ ನೆಲದಲ್ಲಿ
ಮುಂದಗೊಳ್ಳುವ ಬದುಕ ಬಚ್ಚಿಟ್ಟು ಬಿಲದಲ್ಲಿ
ಫಲದಾಶೆ ಮುಚ್ಚಿ ಮನದಲ್ಲಿ

## ಗೋಪಾಲ ಪೂಜಾರಿ

# ಚೂರಿ

ನನ್ನ ಜನ್ಮ ಜಾತಿ ಜಾತಕದ ಉಸಬಾರಿ
ನಿನಗ್ಯಾಕೆ ಚೂರಿ
ನಿನ್ನ ಕೆಂಪು ಬಣ್ಣ
ಕಪ್ಪು ಹೃದಯು ಕೊಳೆತ ಮಿದುಳು

ನಾ ಬಲ್ಲೆ ನಿನ್ನುದ್ದಗಲ
ಹಡಬೆ ದಂಧೆಗೆ ಸೀನುಕ್ಕಿನ ಹಂದರ
ಹಣದ ಥೈಲಿಯು ಥಕ ಥೈ ಗುಂಜಾರ
ಅಜ್ಞಾತ ಕರಸೇವೆ ಆಜನ್ಮ ಕಾರುಬಾರು
ಕುಡಿಯೇನು ಬರಡು ಕೊರಡೇನು ಜೀವ
ಮನವೇನು ಮಾನವೇನು ಅವಮಾನವಿ
ಇಂಚಿಂಚು ಕಚಕಚನೆ ಕಚ್ಚಿ ತೇಗುವ ಮಾಯಾವಿ

ಕೇಳು ಚೂರಿ
ಈ ಮಣ್ಣ ಚರ್ಮ ನನ್ನ ಬಣ್ಣ ಬದುಕು
ನಾನೋ, ಗತ ಪರಂಪರೆ ಹಣ್ಣು ಮುದುಕಿ
ನನ್ನ ಸುಡಿತ್ತೀಯೊ ಹೂಳುತ್ತೀಯೊ
ಹೀಗೇ ನಡು ಬೀದಿಯಲಿ
ನಾರಲು ಬಿಡುತ್ತೀಯೊ
ಹೇಳು ಚೂರಿ
ನನ್ನ ಜನ್ಮ ಜಾತಿ ಜಾತಕದ ಉಸಬಾರಿ
ನಿನಗ್ಯಾಕೆ ಚೂರಿ.

**ಚಂದ್ರಿಕಾ ಸಿ.**

---

# ನನ್ನ ಕವನಗಳು

ಕವನ ಬರೆಯುತ್ತಿದ್ದೇನೆ
ಕಣ್ಣು ಹೃದಯವಿರದ
ರೋಚಕತೆಯಲ್ಲೇ ತೇಲಿಸಿ ಬಿಡುವ
ಇಲ್ಲಿ
ಎಂದಾದರೂ ನಮ್ಮ ಕನಸುಗಳು
ಕಂಡೀತೇ ಯಾವ ಕಣ್ಣಿನಲ್ಲಾದರೂ
ಎಂದು ಹುಡುಕಾಡುವ ಅಕ್ಕ ತಂಗಿಯರ ನಡುವೆ.

'ಏನೂ ಆಗುವುದಿಲ್ಲ' ಘೋಷಣೆಗಳಿಂದಲೇ
ಮುಲಾಜಿಲ್ಲದೇ ಜೀವನವನ್ನೂ

ಸಂಡಿಗೆಯಂತೆ ಬಿಸಿಲಲಿ ಒಣಗಿಸಿಬಿಡುತ್ತಾಳೆ
ಅಮ್ಮ

ಗಂಡನನ್ನೇ ದೇವರೆಂದು ಭಾವಿಸಿ ಪೂಜಿಸುತ್ತಿದ್ದ
ನೆರೆಮನೆಯ ಹುಡುಗಿ
ಇದ್ದಕ್ಕಿದ್ದಂತೆ ಸುಟ್ಟು ಕೆಮಟುವಾಸನೆಯಾಗಿ
ಮೂಗು ಮುಟ್ಟಿದಾಗ
ಕಣ್ಣ ತುಂಬಾ ನೀರು !

ಅಕಸ್ಮಾತ್ತಾಗಿ ಸಿಕ್ಕ ಗೆಳತಿ
ಮಗುವೊಂದನ್ನ ಕಂಕುಳಲ್ಲಿ ಕೂರಿಸಿಕೊಳ್ಳುತ್ತ
ಕೇಳುತ್ತಾಳೆ
'ಏನೇ ವಿಶೇಷ' ?

ನಾನು ನಂಬದ, ನಮ್ಮ ಹಣೆ ಬರೆಹ ದೈವಕ್ಕೆ ಅಮ್ಮ
ಇಪ್ಪತ್ತೊಂದು ಸಾರಿ ನಮಸ್ಕರಿಸುತ್ತಿದ್ದಾಗ
ನನ್ನ ನಗೆ ಕಂಡು ಕಣ್ಣು ಕೆಂಪಾಗಿಸುತ್ತಾಳೆ.
ಅವಳ ತೋಳ್ ತೆಕ್ಕೆಯಿಂದ ನಾನು
ಹಾರಿ ಹೋಗಲು ಯತ್ನಿಸುತ್ತಿದ್ದಂತೇ
ಕಣ್ಣು ಮೂಗು ಒರೆಸಿಕೊಂಡು
ಸಿರ್ ಬಂರ್ ಎಂದು ಮತ್ತೆ ಸಿಡುಕುತ್ತಾಳೆ.

'ಸುಟ್ಟು ಬಿಡೇ ನಿನ್ನ ಆ ಹಾಳು ಪುಸ್ತಕಗಳ !'
ಒಂದು ಕ್ಷಣ ಅತ್ತು ಕೆಂಪಾದ ಮೂಗಿನಲಿ
ಸಣ್ಣದಾಗಿ ನತ್ತು ಹೊಳೆಯುತ್ತದೆ.

ತಕ್ಕಡಿಯಲಿ ನಾನು ಭಾರವಾಗಿ
ಕೆಳಗೆ ಜಗ್ಗುತ್ತಿರುವುದೂ,
ಅವಳು ಹಗುರಾಗಿ
ಮೇಲೆ ಏರುತ್ತಿರುವುದೂ
ಅವಳ ಪಾಲಿನ ದುರಂತ

ಈ ಯಾವ ಯೋಚನೆಗಳೂ ಇಲ್ಲದೇ
ನನ್ನ ಕವನಗಳು ಮಾತ್ರ ಏಕೋ ನಗುತ್ತವೆ.

# ಪ್ರಶಸ್ತಿ ಬಂದಿದೆ!

ನನ್ನ ಚಿತ್ರಕ್ಕೆ
ನೆನಪಿದೆಯೆ? ಆ
ಧಾರಾವಿಯ ಮುದುಕಿಯ
ಬತ್ತಿದೆದೆಯ ಬಗ್ಗೆ ಬರೆದ
ಚಿತ್ರಕ್ಕೆ—
ಪ್ರಶಸ್ತಿ ಬಂದಿದೆ!
ಪ್ರಶಸ್ತಿ! ಚಿಲ್ಲರೆಯದ್ದೇನೂ ಅಲ್ಲ,
ರಾಜ್ಯ ಮಟ್ಟದ್ದ!

ನಾಳೆಯ ಪೇಪರು ಕೊಳ್ಳಿ
ನನ್ನ ಫೋಟೋ ಇದೆ
ರಾಜ್ಯಪಾಲರ ಜತೆ.
ಇಲ್ಲಿ ಬನ್ನಿ ಸ್ವಾಮಿ,
ಇನ್ನೂ ಹತ್ತಿರ, ಒಂದು ಗುಟ್ಟು…
ನಿಮ್ಮ ಕಿವಿಗೆ ಮಾತ್ರ, ಹೂಂ…ಹಾಗೇ…

ಏನು ಗೊತ್ತೆ?
ಚೆಕ್ಕೂ ಇವೆ ಜೊತೆಗೆ,
ಪದಕ ಮಾತ್ರವಲ್ಲ.

ಎಷ್ಟು ಗೊತ್ತೆ?
ನನ್ನ ಕಾರಿನ ಒಂದು ವರ್ಷದ
ಪೆಟ್ರೋಲಿಗೆ ಸಾಲುವಷ್ಟು!

ಇನ್ನು ಖರ್ಚಿನ ತಲೆಬಿಸಿ
ಇಲ್ಲದೆ,

ಅಂಧೇರಿಗೆ ಹೋಗಬಹುದು.
ಅಂಬೇಡ್ಕರ್ ನಗರಕ್ಕೆ. ಮಾಹಿಮ್‌ಕಡೆ,
ಇನ್ನೊಂದು ಮುದುಕಿ...ಬೇಡ,

ಈ ಬಾರಿ ದಂಗೆಯಲಿ ಸತ್ತ
ಇಪ್ಪತ್ತರ ಯುವಕನ
ಹದಿನೇಳರ ವಿಧವೆ ಮತ್ತು ಹಸುಳೆ...
ಹೌದಲ್ಲ, ಈ ಬಾರಿ
ವಸ್ತುಗಳಿಗೆ ಕೊರತೆಯಿಲ್ಲ
ಸುಟ್ಟ ಮನೆಗಳು, ಅಂಗಡಿಗಳು,
ವ್ಯೈಗಳು... ...
ಪುನಃ ಪ್ರಶಸ್ತಿ ಬರಬಹುದು ..
ಯಾರಿಗ್ಗೊತ್ತು?
ರಾಷ್ಟ್ರಪ್ರಶಸ್ತಿಯೆ ಬಂದೀತು!
ಏನಂದಿರಿ? ತಪ್ಪೆ?
ಛೆ! ಇದರಲ್ಲೇನು ತಪ್ಪು ?

ನೋವಿರುವುದೆ ಅದಕ್ಕಲ್ಲವೆ ಸ್ವಾಮಿ ?
ಚಿತ್ರಗಳಾಗುವುದಕ್ಕೆ
ಕತೆ–ಕವನಗಳಾವುದಕ್ಕೆ.
ಈ ಬಡ ದೇಶದಲ್ಲಿ
ನೋವೂ ಒಂದು ಆಸೆಟ್ಟು.
ತಿಳಿಕೊಳ್ಳಿ
ಇಂಥ ನೈಸರ್ಗಿಕ ಸಂಪನ್ಮೂಲಗಳನ್ನು
ಚೆನ್ನಾಗಿ ದುಡಿಸಿಕೊಳ್ಳದಿದ್ದರೆ
ದೇಶ ಶ್ರೀಮಂತವಾಗುವುದಾದರೂ ಹೇಗೆ?

ನೀವೆ ಹೇಳಿ ಸ್ವಾಮಿ!

## ಜಿ. ಪರಮೇಶ್ವರ ಕತ್ತಿಗೆ

# ಸೆಳವಿನ ಜೊತೆಗೆ

ಯುದ್ಧ ಯೋಧರಂತೆ
ಸದ್ದಿಲ್ಲದೆ ಕಾಯುತಿದೆ
ಇರುವೆ ಸಾಲು
ತುಳಿದ ಕಾಲಿಗಾಗಿ.

ಗೆದ್ದಲುಗಳು ಎದ್ದು
ಹೊರ ಬಂದು
ಹುಡುಕುತಿವೆ ಬರುವ
ಹಾವಿಗಾಗಿ.

ಜೋಗುಳ ಮರೆತು
ಜೇನ್ಗೂಡ ಸುತ್ತ
ಬಿಲ್ಲಿಡಿದು ಝೇಂಕರಿಸಿವೆ
ಕರಡಿಗಾಗಿ

ಘಾಟುವಾಸನೆಯ ಹೂಗಳು
ಚಿಟ್ಟೆಗಳ ತಲೆ ಕುಟ್ಟಿ
ನುಂಗುತಿವೆ ಜಡಿದು
ಒಳದೂಡಿ.

ಪ್ರೀತಿ ಪ್ರೇಮಗಳವು
ಮಂಕನೊಳಗಿನ ಕಂಪು
ಕೇದಗೆಗೆ ಸೋತು
ಚಾಚಿ ಹಿಡಿದು ಬಾಚುತಿವೆ
ಕೊಳೆತ ಹೆಣಗಳ ದೂಡಿ.

ಬಿರುಗಾಳಿ ಹಾಡುತಿದೆ
ಹಾಲುಗಲ್ಲದ ಶಿಶು.
ಸೆಟೆದು ನಡೆವ ವೈಖರಿಗೆ
ನಿರಂತರ ವಾಗುತಿದೆ
ಎಲ್ಲೆಲ್ಲೂ ಹೊಂಗಾಳಿ.

ಕೆ. ಫಣಿರಾಜ

---

## ಮತ್ತೊಮ್ಮೆ ಹೇಳಲಾದ
## ಕಳ್ಳ–ಬಸವಣ್ಣನ ಕತೆ

೧

ಕತೆಯೊಂದ ಹಾಗೆಯೇ
ಹೇಳುತ್ತೇನೆ
ಕತೆಯೆಂದೇ ಕೇಳಿ;
ಎಲ್ಲರಿಗೂ ಗೊತ್ತಿದ್ದರೂ
ಮತ್ತೊಮ್ಮೆ ಬಿತ್ತರಿಸುವೆ
ಒಂದಿಷ್ಟು ತಾಳ್ಮೆ ತಾಳಿ:

೨

ಅಣ್ಣ ಬಸವಣ್ಣ ನಿಮ್ಗೆ
ಗೊತ್ತುಂಟು.
ಶರಣರಿಗಾಗಿ ದಾಸೋಹ
ಹಾಗೆಯೇ
ದಾಸೋಹಕ್ಕಾಗಿ ಶರಣರಾದವರು;
ಮಹ ಮನೆಗೆ ಇದ್ದವು
ಬಾಗಿಲುಗಳು–
ಗೋಡೆಗಳಿದ್ದುದರಿಂದ
ಬಾಗಿಲುಗಳು.

ಬಾಗಿಲೊಳಗಿಂದ ಬರುವ
ಶರಣರು.
ಗೋಡೆಯೊಡೆದು ಬರುವ
ಕಳ್ಳರು,
ಎರಡನ್ನೂ ಬಲ್ಲ
ಕಳ್ಳ-
'ಶರಣ'ನಾಗಿಯೇ ಬಾಗಿಲೊಳಗಿಂದ
ಬಂದ
ನಿಮಗೆ ಗೊತ್ತು.
'ಅಯ್ಯಾ ಕಳ್ಳನಲ್ಲವನು
ಕೂಡಲ ಸಂಗಮನಯ್ಯ'
ಎಂದು
ಮೆರೆದ ಬಸವಣ್ಣ –
ಸಿಕ್ಕುಬಿದ್ದವರಷ್ಟೇ ಕಳ್ಳರೇ-
ಎಂದವನಿಗನುಮಾನ;
ಕಳ್ಳ (ಶರಣ) ಗೋಗರೆದ:
'ಕಟ್ಟಿ ಕೊಂಡಿರುವುದು
ಕಲ್ಲೋ ಅಣ್ಣ
ಅದಕ್ಕಿಲ್ಲ ಲಿಂಗದ
ಕಳೆ'–
ಸಿಕ್ಕಿಬಿದ್ದರೂ ಸತ್ಯ ಹೇಳನೇ
ಶರಣ ಎಂದಿವನಿಗನುಮಾನ

೩

ಯಾವ ಬೀದಿಯ ಕಲ್ಲೊ ?
ಯಾವ ಗುಣವೋ ಏನೋ ?
ಲಿಂಗರೂಪಕ್ಕನುಕೂಲ
ಎಂದು ಮಾತ್ರ ಕಳ್ಳನಿಗೆ ಗೊತ್ತು;
ಯಾವ ಬೀದಿಯ ಕಲ್ಲೋ ?
ಯಾವ ರೂಪವೋ ಏನೋ ?
ಲಿಂಗ ಗುಣವರಿತ ಖಾತ್ರಿ
ಬಸವಣ್ಣನಿಗಿತ್ತೊ !

'ಕಲ್ಲೆಂಬ' ನಾಸ್ತಿಕರೇ !
'ಲಿಂಗವೆಂಬ' ಆಸ್ತಿಕರೇ!
ಕತೆ ಹೀಗೆ ಕೇಳಿರುವ
ಬಹುಜನರೇ-
ಕಳ್ಳನೊಳಗಿನ ಬಸವಣ್ಣನ
ಬಸವಣ್ಣನೊಳಗಿನ ಕಳ್ಳನ
ಹಾಗೇ
ಹಿಡಿದಿದ್ದರೇನು !

ಮಾಧವಿ ಭಂಡಾರಿ

## ಕಟ್ಟುವದು ಬಲು ಕಷ್ಟ

ಮಾಮರದ ಮರೆಯಿಂದ
ಕೋಗಿಲೆಯು ಕೂಗು
ಸ್ಸಾರಿ ಹೇಳುವ ಪಟ್ಟು
ಕಟ್ಟುವದು ಬಲು ಕಷ್ಟ
ಕಟ್ಟುವದು ಬಲು ಕಷ್ಟ

ಗೂಡು ಕಟ್ಟದ ಹಕ್ಕಿ
ಹಾಡು ಕಟ್ಟುವಲ್ಲಿ
ಗುಟ್ಟಿರಲೇ ಬೇಕು ನಿಕ್ಕಿ ಎಂದೆನ್ನುವಿರಾ ?

ಗುಟ್ಟೇನು ಇದರಲ್ಲಿ ?
ಗೂಡಿರಲಿ ಗುಡಿಯಿರಲಿ
ಕಟ್ಟುವದಂತೂ ಬಹು ಕಷ್ಟ.
ಕೆಡವುದರ ಬಗ್ಗೆ ಇದ್ದೇ ಇದೆಯಲ್ಲ
ನುಡಿಗಟ್ಟು-
'ಕುಂಬಾರನಿಗೆ ವರುಷ
ದೊಣ್ಣೆಗೆ ನಿಮಿಷ,

ಆ ಪರಪುಟ್ಟನ ಬಿಟ್ಟರೂ
ಬಾನಂಚಿಗೆ ಸಾಲುಗಟ್ಟಿ ಹಾರುವ
ಹಿರಿ–ಕಿರಿಯುದೂ ಕೊಕ್ಕಲ್ಲಿ ಒಂದೊಂದೇ
ಒಂದೊಂದೇ ಹುಲ್ಲುಕಡ್ಡಿಯ ಕಚ್ಚಿ
ರೆಂಬೆ ಕೊಂಬೆಗಳ ಬಳಸಿ
ಕೂಡಿಟ್ಟು ಗೂಡು
ಕಟ್ಟಿದ್ದ ಕಂಡು
ಮಯನೂ ವಿಶ್ವಕರ್ಮನೂ ನಾಚಿದ್ದ.

ಬಿರುಗಾಳಿ ಬಡಿತಕ್ಕೆ
ಬಡಪಾಯಿ ಮರ ಧರೆಗುರುಳಿದ್ದು
ಬೆಚ್ಚನೆಯ ಕನಸುಗಳು ನುಚ್ಚು ನೂರಾದದ್ದು
ಕನಸಲ್ಲ, ಕಟುಸತ್ಯ.
ಮನೆಯಿರಲಿ ಮನವಿರಲಿ
ಬೆಸೆಯುವಂತಿರೆ ಚೆನ್ನ
ಬೆರಸುತ್ತ ವಿಷವ
ಮರೆಸುವದು ವಾಸ್ತವವ
ಸಮಯ ಸಾಧಕತನ.

ಇಗರ್ಜಿಯ ಗಂಟೆನಾದ
ಮಸೀದಿಯ ಬಾಂಗು
ಮಂದಿರದ ಸುಪ್ರಭಾತ
ಬಹುದೂರಿಂದ
ಅಲೆ ಅಲೆಯಾಗಿ ಹೊಮ್ಮಿ ಬಂದರೆ
ಕಿವಿಗೂ ಇಂಪು ಮನಸಿಗೂ ತಂಪು

ಆಗ ಕೋಗಿಲೆ ಹೊಸೆಯುವದೇ ಇಲ್ಲ
ಕಟ್ಟುವದೂ ಬಲು ಕಷ್ಟ
ಕಟ್ಟುವದು ಬಲು ಕಷ್ಟ.

## ಮಾ. ರಾ. ರುದ್ರಾಚಾರ

# ಬೆಳಕು ಮತ್ತು ನಾವು

ಮಾಗಿಯ ಛಳಿಗೆ ಎಲೆ ಉದುರಿ
ಬರಲಾಗಿ ಉಸಿರಿಲ್ಲದೆ ಮೌನ-
ಆಚರಣೆಗೆ ನಿಂತ ಮರಗಳು

ಜೀವ ದ್ರವ್ಯವಿಲ್ಲದೆ ಮಾತು ನಿಂತು
ಮೂಕವಾದ ಯಂತ್ರಗಳು

ನೋವು, ನಿರೀಕ್ಷೆ, ಹತಾಶೆಗಳಿಂದ
ದಿಗಿಲುಗೊಂಡ ಮುಖಗಳಿಗೆ
ಕಳೆಯು ಮುಖವಾಡ ಹಾಕಿಕೊಂಡು
ಬಲವಂತವಾಗಿ ನಗಲು ಹೆಣಗಾಡುವ ಮುಖಗಳು.

ನಿನ್ನೆ ಸತ್ತ ಸುದ್ದಿಯ ಗೋರಿಯ ಮೇಲೆ
ಹುಟ್ಟಿದ ಮತ್ತೊಂದು ಸುದ್ದಿಯೊಂದಿಗೆ ಬೆಳಗಾಗುತ್ತದೆ.
ಅದೇ ದಿಕ್ಕು, ಅದೇ ಸೂರ್ಯ.

ಚುಮು ಚುಮು ಸೂರ್ಯನ ದುರ್ಬಲ ಕಿರಣಗಳಿಗೆ
ಚರ್ಮ ನಚ್ಚಗೆ ಕಾಯಿಸಿಕೊಳ್ಳಲು ತೆರೆದುಕೊಳ್ಳುತ್ತೇವೆ.
ಸುದ್ದಿಗಳ ವಿನಿಮಯವಾಗುತ್ತದೆ.
ಮೃಗಜಲದ ಸುದ್ದಿ ಕೇಳಿ.
ಉರಿಬಿಸಿಲಲಿ ಬೀಸಿಬಂದ ತಂಗಾಳಿಗೆ ಪುಲಕಗೊಳ್ಳುತ್ತೇವೆ.
ಕುಸಿಯುತಿಹ ನಿಂತ ನೆಲ ಕ್ಷಣಕಾಲ ಗಟ್ಟಿಗೊಂಡು
ಆಸೆಗಳು ಕುಡಿಯೊಡೆಯುತ್ತವೆ.
ಸಂಜೆಯವರೆಗೆ ಕನಸುಗಳಿಗೆ ನೀರೆರೆಯುತ್ತಾ ಸಂಭ್ರಮಿಸುತ್ತೇವೆ.

ಹೊತ್ತು ಇಳಿದಂತೆ ಮುಂಕಾಗುವ ಸೂರ್ಯನೊಂದಿಗೆ
ಭರವಸೆಗಳೂ ಮಸುಕಾಗುತ್ತವೆ.
ಸೋತ ಭಾವ, ನಿರೀಕ್ಷೆಗಳಿಂದ ಮತ್ತೆ
ನಾಳೆಯ ಬೆಳಕಿಗಾಗಿ ಕಾಯುತ್ತೇವೆ.

## ಅರುಣ ಬಿ. ಕುಲಕರ್ಣಿ

### ಜ್ಞಾನಿ

'ನಾರಿ
ಮುನಿದರೆ ಮಾರಿ'—
ತತ್ವದಲ್ಲಿ ನಂಬಿಗೆ ಇದ್ದ
ನಮ್ಮ ಸಿದ್ದ ಸಿಟ್ಟಿಗೆದ್ದ.
ಹೆಂಡತಿಯು ಮಾರಿ
ಜ್ಞಾನಿಯಾದ.

## ಅಲ್ಲಾವುದ್ದೀನ್ ಯಮ್ಮಿ

### ಶಂಕೆ

ಗೆಳತಿ,
ಪಾವಿತ್ರ್ಯದಲಿ ನೀನು ಸೀತೆ.
ಅದಕ್ಕೆಂದೇ ನಿನ್ನೊಳಗೆ ನಾ ಅವಿತೆ,
ನಿನ್ನ ಪ್ರೀತಿಸಿದ ಮೇಲೆ
ಸ್ವಲ್ಪ ಬದಲಾಗಿದ್ದೇನೆ.
ಆತ್ಮ ಶುದ್ಧಿಯಲ್ಲಿ ಶ್ರೀರಾಮಚಂದ್ರನಾಗಿದ್ದೇನೆ.
ಅಡಿಗಡಿಗೆ ಅಗಸರ ಮಾತಿಗೆ ಶಂಕಿಸಿ
ಕತ್ತೆಯಾಗಿದ್ದೇನೆ.

## ವೈ. ಎಸ್. ಕೃಷ್ಣಮೂರ್ತಿ

### ಮಣ್ಣಿನ ಉವಾಚ

ಮಣ್ಣು ಹೇಳುತ್ತೆ:
ನನಗಾಗಿ ಯಾಕೆ ಹೀಗೆ
ಕಚ್ಚಾಡುವಿರಿ ?
ಎಂದಾದರೊಂದು ದಿನ ನನ್ನಲ್ಲಿಗೆ
ನೀವು ಖಂಡಿತಾ ಬರಲೇಬೇಕು.
ಮರೆಯದಿರಿ ಅದನ್ನ.

## ಕಾಂತಾ ದತ್ತಾತ್ರೇಯ

### ಭೂಕಂಪ

ಅವ್ವಾ,
ಭೂದೇವಿ,
ನೀ ನಡುಗಿ ತುಂಬಿಸಿದಿ ಬಿಡು
ಬಿಳಿ ಆನೆಗಳ ಜೋಳಿಗಿ

## ಚಂದ್ರಶೇಖರ ಬೆನ್ನೂರ

### ಚಿಂತೆ

ಬೀರು ಬ್ರಾಂದಿಗಳ ನಡುವೆ
ಚಿಂತೆ ಮರೆಯುವೆನೆಂಬ
ಹುಂಬ
ಇಸ್ಪೀಟು ಎಲೆಗಳ ಮಧ್ಯೆ
ರಾಜ ರಾಣಿಯರ
ಚಿಂತೆ ನಡೆಸಿದ

## ಎಚ್. ಜಯಮ್ಮ ಕರಿಯಣ್ಣ

### ಮುಪ್ಪು

ಮುಂಜಾನೆ ಸೂರ್ಯ
ಮುಂಜಾಗುತ್ತ
ನಡೆದಾಗ
ಹೊತ್ತು ಕಂತಿತೆಂದು
ಅತ್ತೇನು
ಲಾಭ ?

ಕೈರೊಳ್ಳಿ ಮಂಜುನಾಥ ಉಡುಪ

## ಬಡ ಪದವೀಧರ

ಹರಿದ ಶರಟನು ತೊಟ್ಟು ಕಣ್ಣು ಆಳಕೆ ಇಟ್ಟು
ಕಾಲಿಗೆ ಹವಾಯಿ ತೊಟ್ಟು
ಬೀಡಿ ಬಾಯಲಿ ಇಟ್ಟು ಕೈಯಲಿ ಫೈಲಿನ ಕಟ್ಟು
ವೃತ್ತಿ ಪಡೆವ ಪಣ ತೊಟ್ಟು
ಹುಡುಕುತ್ತಿದ್ದಾನೆ–ಏನನ್ನು?
ಪಾರ್ಥೇನಿಯಂ ತುಂಬಿದ ಬಯಲಲ್ಲಿ
ಕಮಲದ ಗಿಡವನ್ನು.

ಕೋಟೆಪ್ಪ ಎನ್ ಸವಡಿ

## ಒಲವು

ನಾನು
ಕಾರಂಜಿಯಾಗಿ ಚಿಮ್ಮಲಿಲ್ಲ.
ಒರತೆಯಾಗಿ ಒಸರಿಸಿದೆ.
ಬಾಚಿಗೊಂಡು ತುಂಬಿಕೊಂಡಷ್ಟೂ
ಜಿನುಗುತ್ತಲೇ ಇದ್ದೆ.

ನಾಗೇಶ ರಾಂಪೂರ

## ಸಂವಾದ

‘ಪ್ರಿಯಾ,
ಅದು ತರಲೆ? ಇದು ತರಲೆ?
ಎಂದು ಏನೇನೋ ತರಲು ತೆರಳಿ
ಖಾಲೀ ಕೈಯಲಿ ಮರಳಿ
ಬರುವುದೇನಿದು ತರಲೆ?’

‘ಪ್ರಿಯೆ, ನೀನು ಬೇಡಿದುದನೆಲ್ಲ
ತರುವೆ
ಎನಲು ನಾನೇನು ಕಲ್ಪತರುವೆ?’

ಪ್ರಕಾಶ ಕಡಮೆ

---

## ಪರ್ವತ

ಅದೋ,
ಭೂ ತಾಯಿಯ
ಬಸಿರು.

ಪ್ರಕಾಶ ಆರ್. ಕಮ್ಮಾರ

---

## ಸೂರ್ಯ

ಬೆಳಗಾದೊಡನೆ ಮೂಡಿ
ಬಣ್ಣ ಬಳೀಲಿಕ್ಕೆ ಹೊರಟು
ತಾನೂ ಮೈತುಂಬ ಕೆಂಬಣ್ಣ ಬಡಕೊಂಡು
ಸಂಜೀ ಹೊತ್ನಾಗೆ ಜಳಕಕ್ಕೆ
ಸಮುದ್ರ ಸೇರ್ತಾನೆ.

ಮೋಗರವಳ್ಳಿ ರಮೇಶ

---

## ಹಿಂಡುತ್ತಾರೆ

ನನ್ನ ಹೃದಯ ಜೇನುಗೂಡು.
ಹಿಂಡಿದಾಗ ತೊಟ್ಟಿಕ್ಕುತ್ತವೆ ಹನಿ ಹನಿ
ಜೇನುಗವನಗಳು.
ಅದಕ್ಕೇ ಆಗಾಗ ಹಿಂಡುತ್ತಾರೆ ನನ್ನ
ಜನಗಳು

ಹೆಚ್. ವಿ. ರಮೇಶ

---

## ಬಿಡುವು

ಭಾನುವಾರ!
ಬಿಡುವು
ಎಲ್ಲರಿಗೂ ಎಲ್ಲಕ್ಕೂ.
ನನ್ನ ನಲ್ಲ ಮಾತ್ರ ನನ್ನನ್ನು
ಬಿಡುವು–
ದೇ ಇಲ್ಲ–ಎಲ್ಲಿಗೂ ಏತಕ್ಕೂ.

### ಕೆ. ವಿ. ರಾಜಲಕ್ಷ್ಮಿ

## ದೃಷ್ಟಿ

ನೀ ಕೃಷ್ಣನಾದರೂ
ಸಹಿಸುವ
ಈ ಸಮರಾಜ,
ನಾ ದ್ರೌಪದಿಯಾದರೆ
ದಹಿಸುವುದೇಕೆ ?

### ಟಿ. ಎಸ್. ರಾಜೇಂದ್ರ ಪ್ರಸಾದ

## ದಾಖಲೆ

ಆಗಲಿಲ್ಲ ದಾಖಲೆ
ಪೋಲೀಸ್ ಸ್ಟೇಶನ್ನಿನಲ್ಲೇ
ನಡೆದ
ಕೊಲೆ

### ಲಕ್ಷ್ಮೀ ಸತ್ಯನಾರಾಯಣ

## ಹೆಂಡತಿ

ಹೆಂಡತಿಯಾಗಿರು ನೀನು
ಮನೆ-ಮನ-ಅಂಗಳಕ್ಕೆ ಮಾತ್ರ,
ಮನದನ್ನೆಯಾಗಿರು ನೀನು
ಯೌವನದ ರಸ ನಿಮಿಷಕ್ಕೆ ಮಾತ್ರ.
ಹೆಣ್ಣಲ್ಲವೇ ನೀನು ? ನಿನಗೇಕೆ ಕುಲ-ಗೋತ್ರ ?
ಅವು ಗಂಡಸರಿಗೆ ಮಾತ್ರ.

### ಪಿ. ವಾಸುದೇವರಾವ್

## ಜನತಾ ಪಂಪುಸೆಟ್ಟು

ಆಗುತ್ತಿತ್ತು ಪ್ರಾರಂಭೋತ್ಸವ
ಪುರೋಹಿತರೊಟ್ಟಿಗೆ

ಸಬ್ಸಿಡಿ ಸಾಲದ ಜನತಾ ಪಂಪು ಸೆಟ್ಟಿಗೆ.
ತೆಂಗಿನಕಾಯಿ ಒಡೆದರು
ಪಂಪಿಗೆ ಸೆಟ್ಟಿಗೆ.
ಪಂಪು ಸೆಟ್ಟೆ ಒಡೆಯಿತು ಕಾಯಿಯ ಪೆಟ್ಟಿಗೆ.

ವೀರೇಂದ್ರ ರಾನಿಹಾಳ

## ವಾದ

ಕೋರ್ಟಿನಲ್ಲೇ ಸರಿ ಇಲ್ಲ
ನ್ಯಾಯದ ತಕ್ಕಡಿ:
ಇನ್ನು ಶೆಟ್ಟರ ಅಂಗಡಿಯಲ್ಲಿ
ಹೇಗಿದ್ದರೇನು ಬಿಡಿ.

ಶರಣು ಬಳಿಗಾರ

## ಇನ್ನೊಂದು ಮುಖ

ಕಡಲು ಕರಿ ಮುಸುಕಲ್ಲಿ ಮಲಗಿ
ಕುದಿಯುತ್ತಿರುವುದು
ನಿನ್ನ ಸೇರುವ ಹವಣಿಕೆಗಲ್ಲವೋ
ಮೂರ್ಖ ಚಂದಿರನೆ !
ಮರೆಯಲ್ಲಿ ಅಡಗಿ ಎಲ್ಲೊಂದರಲ್ಲಿ ಚುಂಬಿಸಿ
ಕಚಗುಳಿಯಿಡುತ್ತಿರುವ
ಸೂರ್ಯನ ಶೃಂಗಾರ ಚೇಷ್ಟೆಗೆ

ಶಂಕರರಾವ ಉಭಾಳೆ

## ಸ್ವತಂತ್ರ

ಅಪ್ಪನದು ಜನತಾ ಅಮ್ಮನದು ಕಾಂಗ್ರೇಸು
ಬಂಧು ಬಾಂಧವರದು ದಳವಾದರೆ
ನಮ್ಮಿಬ್ಬರ ಪ್ರೇಮ
ಸ್ವತಂತ್ರ ಪಕ್ಷವಾಗಬೇಕಾಯ್ತಲ್ಲೆ !

ಶಾರದಾ ವಿ. ಮೂರ್ತಿ

## ಅಂತರ

ಕೆಲಸದಾಕೆಯ ಮಗ
ಟಿ. ವಿ. ಯನು ನಿರುಕಿಸಲು
ಗದರಿದಳು ಮನೆಯೊಡತಿ;
'ನೀವೆಲ್ಲಾ ಟಿ.ವಿ. ನೋಡಲು ನಾಲಾಯಕ್ಕು'
ಟೀವಿಯಲಿ ಬಂದಿಳಿದ ಸಿರಿವಂತ ಕುವರ
ಟಿ.ವಿ. ಯನ್ನು ಬಿಚ್ಚಿದರೂ
ಉಲಿಯುವಳು ನಗುನಗುತ:
'ಮುಂದೀತ ಆಗುವನು ಮೆಕ್ಯಾನಿಕ್ಕು'

ಶಿವನಾಗು

## ಭರವಸೆ

ಹಾಲಿಗಾಗಿ ಹಂಬಲಿಸ ಬೇಡ ಕಂದ,
ಯಶಾರಿಗಾಗಿ ನಿನ್ನ ಬೆಂಬಲ ಹೇಳು,
ಹಾಲಿನ ಅಸಮರ್ಪಕ ವಿತರಣೆಗಾಗಿ
ವಿಚಾರಣೆ ಆಯೋಗ ರಚಿಸುತ್ತೇವೆ,

ಸುಜಿ ಕುರ್ಯ

## ಸತ್ಯ

ಅಂದು
ಸತ್ಯಮೇವ ಜಯತೇ !
ಇಂದು
ಸತ್ಯವನ್ನು ಮೇಯುತ್ತಿದೆ
ಜಗತ್ತೇ !!

ಸುಧೀಂದ್ರ ಕೆ. ನಾಡಿಗ್

## ಪ್ರೇಮ

ಅಂದು ಏಕಾಂತದಲಿ 'ಪ್ರೇಮ ಕುರುಡು'
ಅಂದದ್ದಕ್ಕೆ ಸಿಡಿಮಿಡಿಗೊಂಡಳು
ನೆನ್ನಾಕೆ ಪ್ರೇಮ.
ಧುಮುಧುಮುಗುಟ್ಟುತ್ತಾ ನಡೆದೇ ಬಿಟ್ಟಳು
ಸರಿಪಡಿಸಿಕೊಳ್ಳುತ್ತ
ತನ್ನ ದಪ್ಪ ಕನ್ನಡಕದ ಪ್ರೇಮ

ಸುಬ್ರಹ್ಮಣ್ಯ ಭಟ್

## ಆ-ಗಲ್ಲ

ಆಗಲ್ಲ...ಆಗಲ್ಲರೀ ಎಂದು ನಾಚಿ
ದೂರ ಸರಿಯುತ್ತಿದ್ದ ನಲ್ಲೆಗೆ ನಲ್ಲ
ತನ್ನ ಆ ಗಲ್ಲ
ನೀಡಿದ.

## ಈ ಸಂಚಿಕೆಯ ಲೇಖಕರು

**ಬಸು ಬೇವಿನಗಿಡದ** ಆಕಾಶವಾಣಿ, ಗುಲಬರ್ಗಾ ೫೮೫ ೧೦೩ **ಆರ್. ಮೋಹನ ನಾಗಮ್ಮನವರ** ತಲವಾಯಿಯವರ ತೋಟ, ನವೋದಯ ನಗರ, ಧಾರವಾಡ ೫೮೦ ೦೦೩ **ಆರ್. ನಿರ್ಮಲ** ಚಾರ್ವಾಕ, ಪಂಚಮಂತ್ರ ರಸ್ತೆ, ಕುವೆಂಪು ನಗರ, ಮೈಸೂರು ೫೭೦ ೦೨೩ **ಕೆ. ಆರ್. ಆನಂದ** c/o ಎನ್. ಎಸ್. ಸೀತಾರಾಮರಾವ್, ೭/೫೬೭, ೪ನೇ ಕ್ರಾಸ್, ಕಸ್ತೂರಿಬಾ ಬಡಾವಣೆ, ದಾವಣಗೆರೆ ೫೭೭ ೦೦೧ **ಕರುಣಾಕರ ಮುದ್ರಾಸು** ಸಂಶೋಧಕ, ಕನ್ನಡ ವಿಭಾಗ, ಮದ್ರಾಸ ವಿ. ವಿ., ಮದ್ರಾಸ ೬೦೦ ೦೦೫ **ಕೊಂಪಿ ಗುರುಬಸಪ್ಪ** ಪಿ. ಡಬ್ಲ್ಯೂ. ಡಿ. ವಿಭಾಗ, ಚಿಕ್ಕಮಗಳೂರು ೫೭೭ ೧೦೧ **ಗೋಪಾಲ ಪೂಜಾರಿ** ನಂ. ೬, ಜೆ. ಎಂ. ಹೌಸಿಂಗ್ ಸೊಸೈಟಿ. ನಂ. ೪, ಸುಭಾಸನಗರ, ಘಾಟಕೋಪರ (ಪ), ಮುಂಬಯಿ ೪೦೦ ೦೮೪ **ಚಂದ್ರಿಕಾ ಪಿ.** ಎಂ. ಎ. (ಅಂ), ಕನ್ನಡ ಭಾರತಿ, ಕುವೆಂಪು ವಿ. ವಿ., ಬಿ. ಆರ್. ಪಿ. ೫೭೭ ೧೧೫ **ಚಿತ್‌ಪ್ರಭಾ** ಉಜಿರೆ ೫೭೪ ೨೪೦ **ಜಿ. ಪರಮೇಶ್ವರ ಕತ್ತಿಗೆ** ರಾಘವೇಂದ್ರ ನಿಲಯ, ಕುಂಬಾರ ಬೀದಿ, ಹರಿಹರ ೫೭೭ ೬೦೧ **ಫಣಿರಾಜ ಕೆ.** ಪಾಯ್ಸ್ ಕಾಂಪೌಂಡ, ಕೊಟ್ಟಾರ

ಕ್ರಾಸ್ ರಸ್ತೆ, ಮಂಗಳೂರು ೫೭೫ ೦೦೪ **ಮಾಧವಿ ಭಂಡಾರಿ** ೭-೨-೫೮ ಸಿ, ನಿಶಾಂತ, ವಾದಿರಾಜ ಕ್ರಾಸ್, ಉಡುಪಿ ೫೭೬ ೧೦೧ **ಮಾ. ರಾ. ರುದ್ರಾಚಾರ** ಸಂರಕ್ಷಣಾ ಅಧಿಕಾರಿ, ಎಸಿಸಿ ಬ್ಯಾಬಕಾಕ್, ಶಹಾಬಾದ ೫೮೫ ೨೨೮.

**ಅರುಣ ಬಿ. ಕುಲಕರ್ಣಿ** ಶ್ರೀ ದತ್ತಮಂದಿರ, ನರೇಗಲ್ಲ ೫೮೨ ೧೧೯ **ಅಲ್ಲಾವುದ್ದೀನ ಯಮ್ಮಿ** ಪತ್ರಕರ್ತ-ಲೇಖಕ, ಕುಕನೂರು ೫೮೩ ೨೩೨ **ವೈ. ಎಸ್. ಕೃಷ್ಣಮೂರ್ತಿ** ಜಿ-೨, ನೌಕರರ ವಾಸಗೃಹ, ಜ್ಞಾನಭಾರತಿ, ಬೆಂಗಳೂರು ೫೬೦ ೦೫೬ **ಕಾಂತಾ ದತ್ತಾತ್ರಯ** ಶಿಕ್ಷಕಿ, ರಾಮಕೃಷ್ಣಮಠ ಹೈಸ್ಕೂಲು, ಹುಲಕೋಟಿ ೫೮೨ ೨೦೫ **ಚಂದ್ರಶೇಖರ ಬೆನ್ನೂರ** ಮೇಲ್ವಿಚಾರಕ, ಪ್ರಸಕ್ಯನಾ ಅ ಬ್ಯಾಂಕ್, ಹೂವಿನ ಹಡಗಲಿ ೫೮. ೨೧೯ **ಎಚ್. ಜಯಮ್ಮ ಕರಿಯಣ್ಣ** ಆಶೀರ್ವಾದ, ೨೯೩೩, ೧೩ ನೇ ಮೇನ್, ವಿಜಯನಗರ, II ಹಂತ, ಬೆಂಗಳೂರು ೫೬೦ ೦೪೦ **ತೈಕೊಳ್ಳಿ ಮಂಜುನಾಥ ಉಡುಪ** ಮಂಗಳ ಪ್ರಕಾಶನ, c/o ಪರಮೇಶ್ವರ ಭಟ್ಟರು, ಬಾಳಗಡಿ ಕೊಪ್ಪ ೫೭೭ ೧೨೬ **ತೋಟಪ್ಪ ಎನ್. ಸವಡಿ** ೨೨೫೪, ಸ್ಕ್ವಾಡ್ರನ್ ಏರ್ ಸರ್ವಿಸ್, c/o ೫೬, ಎ ಪಿ. ಓ. **ನಾಗೇಶ ರಾಂಪೂರ** ಕನ್ನಡ ಉಪನ್ಯಾಸಕ, ಆರ್. ಡಿ. ಪಾಟೀಲ ಪ. ಪೂ. ಕಾಲೇಜು, ಸಿಂದಗಿ ೫೮೬೧೨೮ **ಪ್ರಕಾಶ ಕಡಮೆ** ಚಿಕ್ಕ ನೀರಾವರಿ ವಿಭಾಗ, ಹಳಿಯಾಳ ೫೮೧ ೩೨೯ **ಪ್ರಕಾಶ ಆರ್. ಕಮ್ಮಾರ** ನಂ. ೨೫/೧೦೫, ಸರಕಾರಿ ನೌಕರ ಭವನದ ಹತ್ತಿರ, ಸಾಗರ ೫೭೭ ೪೦೧ **ಮೋಗರವಳ್ಳಿ ರಮೇಶ** ಸ್ಟೇಟ ಬ್ಯಾಂಕ್ ಆಫ್ ಮೈಸೂರು, ಸಾಗರ ೫೭೭ ೪೦೧ **ಹೆಚ್. ವಿ. ರಮೇಶ** ಬಿ-೪೭೩-೦೫೮೫೭. ಅಭಿಯಂತರು, ಗುಣನಿಯಂತ್ರಣ, ಬಿಇಎಂಎಲ್ ಕಾರಖಾನೆ, **ಕೆ. ಜಿ. ಎಫ್** ೫೬೩೧೧೫ **ಕೆ. ವಿ. ರಾಜಲಕ್ಷ್ಮಿ** ೮/೩, ಶ್ರೀರಾಮ, ೧೧ ನೇ ಕ್ರಾಸ್, ಈಜುಗೊಳ ಬಡಾವಣೆ, ಬೆಂಗಳೂರು ೫೬೦ ೦೦೩ **ಟಿ. ಎಸ್. ರಾಜೇಂದ್ರ ಪ್ರಸಾದ** ಸಮುದಾಯ ಆರೋಗ್ಯ ಕೇಂದ್ರ, ಹೊಸದುರ್ಗ ೫೭೭ ೫೨೭ **ಲಕ್ಷ್ಮೀ ಸತ್ಯನಾರಾಯಣ** I ಕ್ಲಾಸ್ ಆಫೀಸರ್ಸ್ ಕ್ವಾರ್ಟರ್ಸ್, ಇರಿಗೇಶನ್ ಕಾಲನಿ, ಯರವಡಾ, ಪುಣೆ ೪೧೧ ೦೦೬ **ಪಿ. ವಾಸುದೇವರಾವ** ಹೆಮ್ಮಕ್ಕಳ ಸರಕಾರಿ ಪ. ಪೂ. ಕಾಲೇಜು ಉಡುಪಿ ೫೭೬ ೧೦೧ **ವೀರೇಂದ್ರ ರಾವಿಹಾಳ** ಮುಖ್ಯ ರಸ್ತೆ, ತೆಕ್ಕಲಕೋಟೆ ೫೮೩ ೧೨೨ **ಶರಣು ಬಳಿಗಾರ** ಕಸಬಾ ಓಣಿ ನರಗುಂದ ೫೮೨ ೨೦೭ **ಶಂಕರರಾವ್ ಉಭಾಳೆ** ಮೇನ್‌ರೋಡ, ದೇವದುರ್ಗ ೫೮೪ ೧೧೧ **ಶಾರದಾ ವಿ. ಮೂರ್ತಿ** ನಂ. ೨೦೨, ೬ನೇ ಕ್ರಾಸ್, ಮೈಕೊ ಲೇಔಟ, ಬಿಟಿಎಂ. ೨ ನೇ ಹಂತ, ಬನ್ನೇರುಘಟ್ಟ ರಸ್ತೆ, ಬೆಂಗಳೂರು ೫೬೦ ೦೬೬ **ಶಿವನಾಗು** ನಂ. ೧೫೧೧, ೨ನೇ ಕ್ರಾಸ್, ಅಶೋಕಪುರ, ಮೈಸೂರು ೫೭೦ ೦೦೮ **ಸುಜಿ ಕುರ್ಯ** ಸುಮ ನಿಲಯ, ಕುರ್ಯ, ವಯಾ ಆರ್ಯಾಪು, ಪುತ್ತೂರು ೫೭೪ ೨೧೦. **ಸುಧೀಂದ್ರ ಕೆ. ನಾಡಿಗ** ಸಹಾಯಕ ಭವಿಷ್ಯನಿಧಿ ಆಯುಕ್ತರ ಕಚೇರಿ, ೪ನೇ ಅಂತಸ್ತು, ಶ್ರೀನಾಥ ಕಾಂಪ್ಲೆಕ್ಸ್, ಎನ್ ಸಿ ಎಂ, ಹುಬ್ಬಳ್ಳಿ ೫೮೦ ೦೨೯ **ಸುಬ್ರಹ್ಮಣ್ಯ ಭಟ್** ಕಾರ್ಪೊರೇಶನ್ ಬ್ಯಾಂಕ್, ಮಡಂತ್ಯಾರು ೫೭೪ ೨೨೪.

**ಪ್ರಕಟವಾಗಿವೆ**

ಪ್ರಗತಿಶೀಲ-ನವ್ಯ-ದಲಿತ-ಬಂಡಾಯ — ಸಂ: ಚಂಪಾ ರೂ. ೪೫
(ಸಂಕ್ರಮಣ ಸಾಹಿತ್ಯ : ಸಂಪುಟ ೨)

ಸಂಕ್ರಮಣ ಕಾವ್ಯ ಸಂಚಯ
(ಬಹುಮಾನಿತ ಕವನಗಳ ಸಂಕಲನ) — ಸಂ: ಚಂಪಾ ರೂ. ೩೦